

ಸೆಪ್ಟೆಂಬರ್, 1996

# ಸಪ್ತಗಿರಿ

ಬೆಲೆ : ರೂ. 4-00

ತಿರುಮಲ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಬಲಿಯ ಮನೆಗೆ ವಾಮನ ಬಂದಂತೆ
ಭಗೀರಥಗೆ ಶ್ರೀ ಗಂಗೆ ಬಂದಂತೆ
ಮುಚಕುಂದಗೆ ಶ್ರೀ ಮುಕುಂದ ಬಂದಂತೆ
ಗೋಪಿಯರಿಗೆ ಗೋವಿಂದ ಬಂದಂತೆ
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ
ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ
ನಿನ್ನ ನಾಮವು ಬಂದು ಎನ್ನ ನಾಲಿಗೆಯಲಿ
ನಿಂದು ಸಲಹಲಿ ಶ್ರೀ ಪುರಂದರ ವಿಠಲ

-ಶ್ರೀ ಪುರಂದರದಾಸರು



# ತಿರುಪತಿ ರೈಲುಗಳ ಆಗಮನ ನಿರ್ಗಮನಗಳು

ತಿರುಪತಿಗೆ ಬರುವ ಹಾಗೂ ತಿರುಪತಿಯಿಂದ ಹೊರಡುವ ರೈಲುಗಳ ಬ್ರಾಡ್‌ಗೇಜ್ ಹಾಗೂ ಮೀಟರ್‌ಗೇಜ್ ರೈಲುಗಳ ವಿವರಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಪಾಠಕ ಯಾತ್ರಿಕರು ಗಮನಿಸಿ ತಮ್ಮ ಪ್ರಯಾಣವನ್ನು ಸುಖಕರ ಮಾಡಿಕೊಳ್ಳಬೇಕೆಂದು ಕೋರಲಾಗಿದೆ.

| ರೈಲು ವಿವರ | ತಿರುಪತಿ ಸೇರುವ ವೇಳೆ | ತಿರುಪತಿ ಬಿಡುವ ವೇಳೆ |
|---|---|---|
| | ಬ್ರಾಡ್‌ಗೇಜ್ | |
| ಕಾಕಿನಾಡ (ಪ್ಯಾಸೆಂಜರ್) | ಬೆಳಗ್ಗೆ 3-15 ಗಂಟೆಗೆ | ರಾತ್ರಿ 23-30 ಗಂಟೆಗೆ |
| ಮೈಸೂರು (ಪ್ಯಾಸೆಂಜರ್) | ಬೆಳಗ್ಗೆ 4-00 ಗಂಟೆಗೆ | ರಾತ್ರಿ 22-00 ಗಂಟೆಗೆ |
| ಸಿಕಂದರಾಬಾದ್ (ನಾರಾಯಣಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 6-25 ಗಂಟೆಗೆ | ಸಂಜೆ 18-30 ಗಂಟೆಗೆ |
| ವಿಶಾಖಪಟ್ನಂ (ತಿರುಮಲ ಎಕ್ಸ್‌ಪ್ರೆಸ್) | ಬೆಳಗ್ಗೆ 7-35 ಗಂಟೆಗೆ | ರಾತ್ರಿ 19-00 ಗಂಟೆಗೆ |
| ಹೈದರಾಬಾದು (ರಾಯಲಸೀಮೆ ಎಕ್ಸ್‌ಪ್ರೆಸ್) | ಬೆಳಗ್ಗೆ 9-05 ಗಂಟೆಗೆ | ಸಂಜೆ 15-30 ಗಂಟೆಗೆ |
| ಮದ್ರಾಸು (ಸಪ್ತಗಿರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 10-05 ಗಂಟೆಗೆ |
| ಒಂಗೋಲು (ಪ್ಯಾಸಿಂಜರ್) | ಮಧ್ಯಾಹ್ನ 12-00 ಗಂಟೆಗೆ | ಮಧ್ಯಾಹ್ನ 14-15 ಗಂಟೆಗೆ |
| ಕೊಚ್ಚಿನ್ - ವಾರಣಾಸಿ (ವಾರಣಾಸಿ ಎಕ್ಸ್‌ಪ್ರೆಸ್) (ತಿರುಪತಿಯ ಮೂಲಕ ಮಂಗಳವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಮಂಗಳವಾರ) |
| ವಾರಣಾಸಿ - ಕೊಚ್ಚಿನ್ (ಕೊಚ್ಚಿನ್ ಎಕ್ಸ್‌ಪ್ರೆಸ್) (ತಿರುಪತಿ ಮೂಲಕ ಭಾನುವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಭಾನುವಾರ) |
| ವಾರಣಾಸಿ - ತಿರುಪತಿ (ವಾರಣಾಸಿ ಎಕ್ಸ್‌ಪ್ರೆಸ್) ಮಂಗಳವಾರ - ಭಾನುವಾರಗಳಲ್ಲಿ | ಮಧ್ಯಾಹ್ನ 13-20 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ |
| ಪೂರಿ - ತಿರುಪತಿ (ಪೂರಿ ಎಕ್ಸ್‌ಪ್ರೆಸ್) ಬುಧ - ಶುಕ್ರವಾರಗಳಲ್ಲಿ | ಮಧ್ಯಾಹ್ನ 13-25 ಗಂಟೆಗೆ | ಬೆಳಗ್ಗೆ 9-45 ಗಂಟೆಗೆ |
| ಮದರಾಸು - ತಿರುಪತಿ (ಸಪ್ತಗಿರಿ ಎಕ್ಸ್‌ಪ್ರೆಸ್) | ಮಧ್ಯಾಹ್ನ 16-50 ಗಂಟೆಗೆ | ಸಂಜೆ 17-30 ಗಂಟೆಗೆ |
| ತಿರುಪತಿ - ಕಡಪ (ಇಂಟರ್‌ಸಿಟಿ ಎಕ್ಸ್‌ಪ್ರೆಸ್) | ರಾತ್ರಿ 20-15 ಗಂಟೆಗೆ | ಬೆಳಗ್ಗೆ 6-30 ಗಂಟೆಗೆ |
| ತಿರುಪತಿ - ಗೂಡೂರು (ಗೂಡೂರು ಪ್ಯಾಸೆಂಜರ್) | ರಾತ್ರಿ 20-30 ಗಂಟೆಗೆ | ಬೆಳಗ್ಗೆ 6-25 ಗಂಟೆಗೆ |
| ಹೈದರಾಬಾದು (ಕೃಷ್ಣಾ ಎಕ್ಸ್‌ಪ್ರೆಸ್) | ರಾತ್ರಿ 21-30 ಗಂಟೆಗೆ | ಬೆಳಗ್ಗೆ 5-30 ಗಂಟೆಗೆ |
| ಅರಕೋಣಂ ಅರಕೋಣಂ ಪ್ಯಾಸೆಂಜರ್ | ರಾತ್ರಿ 23-15 ಗಂಟೆಗೆ | ಬೆಳಗ್ಗೆ 4-05 ಗಂಟೆಗೆ |
| | ಮೀಟರ್ ಗೇಜ್ ರೈಲುಗಳು | |
| ಮಧುರೆ (ಮೀನಾಕ್ಷಿ ಎಕ್ಸ್‌ಪ್ರೆಸ್) | ಬೆಳಗ್ಗೆ 4-50 ಗಂಟೆಗೆ | ಮಧ್ಯಾಹ್ನ 15-40 ಗಂಟೆಗೆ |
| ಗುಂತಕಲ್ (ಗುಂತಕಲ್ ಪ್ಯಾಸೆಂಜರ್) | ಬೆಳಗ್ಗೆ 5-15 ಗಂಟೆಗೆ | ಬೆಳಗ್ಗೆ 6-00 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 8-55 ಗಂಟೆಗೆ | ಬೆಳಗ್ಗೆ 10-30 ಗಂಟೆಗೆ |
| ಮಹಬೂಬ್ ನಗರ್ (ವೆಂಕಟಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 14-40 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 11-25 ಗಂಟೆಗೆ | ಸಂಜೆ 17-30 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಮಧ್ಯಾಹ್ನ 14-35 ಗಂಟೆಗೆ | ಬೆಳಗ್ಗೆ 7-00 ಗಂಟೆಗೆ |
| ಗುಂತಕಲ್ (ಗುಂತಕಲ್) | ಸಂಜೆ 18-45 ಗಂಟೆಗೆ | ರಾತ್ರಿ 21-45 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಸಂಜೆ 19-45 ಗಂಟೆಗೆ | ಬೆಳಗ್ಗೆ 2-45 ಗಂಟೆಗೆ |





ಸಂಪುಟ -- 27 ಸೆಪ್ಟೆಂಬರ್ 1996 ಸಂಚಿಕೆ --4

# ವಿಷಯಸೂಚಿ



ಮುಖಚಿತ್ರ: ವಜ್ರಕವಚದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ.

ಹಿಂಬದಿಯಲ್ಲಿ: ವಿನಾಯಕ - ಚಿತ್ರ - ಜಿ. ಚಂದ್ರಶೇಖರ್.

ಒಳಗಡೆ: 1) ಬಾಲಕೃಷ್ಣ.

2) ತಿರುಮಲೆಯಲ್ಲಿನ ಶ್ರೀ ವರಾಹಸ್ವಾಮಿ.


ಗೌರವ ಸಂಪಾದಕರು:

ಎಂ. ಕೆ. ಆರ್. ವಿನಾಯಕ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ:

ಎನ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ:

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಮ್. ಲಕ್ಷ್ಮಣ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

ಬಿಡಿ ಪ್ರತಿ ೪--೦೦

ವಾರ್ಷಿಕ ಚಂದಾ ೪೮--೦೦




ಗೌರವ ಸಂಪಾದಕರು :

ಎಂ. ಕೆ. ಆರ್. ವಿನಾಯಕ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಎಮ್. ಲಕ್ಷ್ಮಣ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು.

ಬಿಡಿ ಪ್ರತಿ ೪--೦೦

ವಾರ್ಷಿಕ ಚಂದಾ ೪೮--೦೦


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||


ಸಂಪುಟ -- 27 ಸೆಪ್ಟೆಂಬರ್ 1996 ಸಂಚಿಕೆ --4


# ವಿಷಯಸೂಚಿ



ಮುಖ ಚಿತ್ರ : ವಜ್ರಕವಚದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ.

ಹಿಂಬದಿಯಲ್ಲಿ : ವಿನಾಯಕ - ಚಿತ್ರ - ಜಿ. ಚಂದ್ರಶೇಖರ್.

ಒಳಗಡೆ : 1) ಬಾಲಕೃಷ್ಣ.

2) ತಿರುಮಲೆಯಲ್ಲಿನ ಶ್ರೀ ವರಾಹಸ್ವಾಮಿ.




ವರ್ಷಕ್ಕೆ ಒಮ್ಮೆ ಬರುವ ತಿರುಮಲೆಯ ಬ್ರಹ್ಮೋತ್ಸವ ಮೂರುವರ್ಷಗಳಿಗೊಮ್ಮೆ ಅಧಿಕ ಮಾಸ ಬರುವ ವರ್ಷದಲ್ಲಿ ಎರಡು ಆಗುತ್ತದೆ. ಒಂದು ಕಾಲಕ್ಕೆ ವರ್ಷದಲ್ಲಿ ಹದಿಮೂರು ಬಾರಿ ಬ್ರಹ್ಮೋತ್ಸವಗಳು ನಡೆಯುತ್ತಿದ್ದ ಐತಿಹಾಸಿಕ ದಾಖಲೆಗಳೂ ಇವೆಯಾದರೂ ಸಧ್ಯಕ್ಕೆ ವಾರ್ಷಿಕ ಬ್ರಹ್ಮೋತ್ಸವ ಎಂಬ ಹೆಸರಿನಲ್ಲಿ ಒಂದೇ ಬ್ರಹ್ಮೋತ್ಸವ. ಅಧಿಕ ಮಾಸದ ವರ್ಷದಲ್ಲಿ ನವರಾತ್ರಿ ಬ್ರಹ್ಮೋತ್ಸವ ಎರಡನೆಯದಾಗುತ್ತದೆಯಷ್ಟೆ. ಇಲ್ಲಿ ಧ್ವಜಾರೋಹಣ ಅವರೋಹಣಗಳಿರದು. ಸ್ವಾಮಿಯ ರಥೋತ್ಸವಕ್ಕೆ ಬೆಳ್ಳಿಯ ರಥದ ಬಳಕೆ, ಈ ಬಾರಿ ಎರಡನೇ ರಥೋತ್ಸವದಲ್ಲಿ ಬಂಗಾರದ ತೇರು ಬಳಕೆಯಾಗುತ್ತದೆ ಎಂಬುದಷ್ಟೇ ಅಲ್ಲ ಎರಡೂ ಬ್ರಹ್ಮೋತ್ಸವಗಳ ವಸಂತೋತ್ಸವಗಳಲ್ಲಿ ಸ್ವಾಮಿಯನ್ನು ವಸಂತಮಂಟಪಕ್ಕೆ ಕರೆತರಲು ಬಂಗಾರದ ರಥವನ್ನೇ ಬಳಸಲಾಗುತ್ತದೆ; ಎಂಬುದೂ ಮುಖ್ಯವಾಗುತ್ತದೆ.

ಬ್ರಹ್ಮನೇ ಆರಂಭಿಸಿದ್ದು ಎಂಬುದರಿಂದ ಬ್ರಹ್ಮೋತ್ಸವ ಎಂಬ ಹೆಸರೆಂದರು. ಬ್ರಹ್ಮಾಂಡನಾಯಕನಾದ ಆ ಪ್ರಭುವಿನ ಉತ್ಸವ ಬ್ರಹ್ಮೋತ್ಸವ ಎಂಬುದೂ ಇರಬೇಕು. ಜೊತೆಗೇ ನಿತ್ಯಕಲ್ಯಾಣ ಪಚ್ಚತೋರಣಗಳ ಸ್ವಾಮಿಗೆ ನಿತ್ಯವೂ ಒಂದಿಲ್ಲ ಒಂದು ಹೆಸರಿನಲ್ಲಿ ಉತ್ಸವ ನಡೆಯುತ್ತಿರುವಾಗ, ಅವುಗಳಲ್ಲಿ ಅತಿ ದೀರ್ಘಕಾಲದ್ದೂ, ಅತಿ ವೈಭವಕರವಾದದ್ದೂ ಆದ ಉತ್ಸವವಾಗಿ ಬ್ರಹ್ಮೋತ್ಸವ ಎಂದಾಗಿರಬೇಕು. ಯಾವುದು ಏನೇ ಆದರೂ ಈ ಒಂದು ಹತ್ತುದಿನಗಳ ಕಾಲ ತಿರುಮಲೆಯಲ್ಲಿ ದೇವದುರ್ಲಭವಾದ ನೋಟ, ವಿವಿಧ ರೀತಿಯ ವಾಹನಗಳಲ್ಲಿ ಸ್ವಾಮಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ಆಲಯದ ಹೊರಬಂದು ಭಕ್ತರ ನಡುವೆ - ಭಕುತ ಜನ ಮುಂದೆಯಾಗಿರಲು - ಹಿಂದೆ ಬರುವ ಹಿರಿಯ ದೈವವಾಗಿ ಬಂದು ನಮನಾನಂದಕರ, ಆತ್ಮ ತೃಪ್ತಿಕರನಾಗುತ್ತಾನೆ. ಇಂತಹ ಉತ್ಸವ ಎರಡು ಬಾರಿ ನಡೆಯುತ್ತದೆ. ಸೆಪ್ಟೆಂಬರ್ ತಿಂಗಳಲ್ಲಿ ಒಂದಾದರೆ ಅಕ್ಟೋಬರ್ ತಿಂಗಳಲ್ಲಿ ಮತ್ತೊಂದು ಬಾರಿ.

ಸ್ವಾಮಿ ಭಕ್ತರ ಬಳಿಗೆ ಬರಲೆಂದೇ ವೈಕುಂಠವನ್ನು ಬಿಟ್ಟು ಪುಷ್ಕರಿಣೀ ತೀರದಲ್ಲಿ ನೆಲೆನಿಂತ ಎಂದು ಪುರಾಣ ವಾಕ್ಯ, ಆದರೆ ಭಕ್ತರ ಅಂತರಂಗವನ್ನು ಪ್ರವೇಶಿಸಲೆಂದೇ ಆಲಯದಿಂದ ಹೊರಬರುತ್ತಾನೆ ಎಂಬುದು ಅನುಭವ ವಾಕ್ಯ. ಗೋವಿಂದ ನಾಮ ಘೋಷದ ನಡುವೆ ಬ್ರಹ್ಮೋತ್ಸವದ ಮಂಗಳಮಯ ಸಮಯದಲ್ಲಿ ಬೆಟ್ಟದಲ್ಲಿ ನಿಂತ ಭಕ್ತ ಒಳ ಹೊರಗೆ ಅವನ ಮೂರ್ತಿಯನ್ನು ಕಂಡು ಆನಂದಿಸುವ ಸಂದರ್ಭ ದೊರೆಯುತ್ತದೆಯಾಗಿ ಅಂದು ಎಲ್ಲರಿಗೂ ಬೆಟ್ಟಕ್ಕೆ ಬರುವ ಅಪೇಕ್ಷೆ ಬಹು ಸಹಜ.

ಆಲಯದ ಆಡಳಿತ ಸಿಬ್ಬಂದಿಯೂ ಈ ಉತ್ಸಾಹ ತುಂಬಿದ ಉತ್ಸವವನ್ನು ಯಶಸ್ವಿಗೊಳಿಸಲು, ಇಲ್ಲಿ ಬರುವ ಯಾತ್ರಿಕರ ಕನಿಷ್ಠ ಅವಸರಗಳನ್ನು, ಅಗತ್ಯಗಳನ್ನು ಪೂರೈಸಲು, ಅವರ ಆರೋಗ್ಯ ರಕ್ಷಣೆಗಳನ್ನು ಕಾಪಾಡಲು, ಅವರ ನೈರ್ಮಲ್ಯ, ನಿತ್ಯಪೂಜೆಗಳ ಬಗ್ಗೆ ಗಮನ ನೀಡಲು, ಅವರು ವ್ಯವಸ್ಥಿತವಾಗಿ ಸ್ವಾಮಿಯನ್ನು ದರ್ಶಿಸಲು ಅನುಕೂಲಮಾಡಿಕೊಡಲು, ನಡುಕಟ್ಟಿ ನಿಂತಿದೆ. ಈ ಮಾನವ ಸೇವೆಯಲ್ಲಿ ಮಾಧವ ಸೇವೆಯನ್ನು ಕಾಣುವ ತವಕದಲ್ಲಿ ತುದಿಗಾಲಿನಲ್ಲಿ ನಿಂತು ಸಿದ್ಧವಾಗಿದೆ. ಇಂತಹ ಒಂದು ದಿವ್ಯ ಸಂಧಿಯಲ್ಲಿ ತಮ್ಮನ್ನು - ಯಾತ್ರಿಕ ಭಕ್ತರನ್ನು ಸಪ್ತಗಿರಿ ವಿನಮ್ರವಾಗಿ ತಿರುಮಲೆಗೆ ಆಹ್ವಾನಿಸುತ್ತದೆ. ತಾವೂ ಬನ್ನಿ ತಮ್ಮವರನ್ನೂ ಕರೆತನ್ನಿ. ಶ್ರೀ ವೆಂಕಟೇಶ್ವರಸ್ವಾಮಿಯ ಬ್ರಹ್ಮೋತ್ಸವಗಳಲ್ಲಿ ಪಾಲು ಪಡೆದು ಧನ್ಯರಾಗಿರಿ ಎಂದು ಬೇಡುತ್ತದೆ.

ವೇಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋ ದೇವೋ ನ ಭೂತೋ ನ ಭ[illegible]

* * *

# ಗಣಪತಿ ಪೂಜೆ

---ವಿದ್ವಾನ್ 'ರಘುಸುತ'.

ಕ್ರಿ.ಶ. ೧ನೇ ಶತಮಾನದಿಂದಲೂ ಭಾರತದಲ್ಲಿ ಗಣಪತಿ ಪೂಜೆಯು ರೂಢಿಯಲ್ಲಿದೆ. ಏಸುಕ್ರಿಸ್ತನಿಗೂ ಹಿಂದಿನದು ಎನ್ನಲಾಗುವ 'ಗೋಭಿಲ ಸ್ಮೃತಿ'ಯಲ್ಲಿ ಪ್ರತಿಯೊಂದು ಶುಭಕಾರ್ಯದ ಪ್ರಾರಂಭದಲ್ಲೂ ಗಣಪತಿಯ ಪೂಜೆಯನ್ನು ಮಾಡಬೇಕು ಎಂದು ತಿಳಿಸಲಾಗಿದೆ. ಆ ನಂತರವೇ ಆ ಶುಭಕಾರ್ಯದ ಇತರೇ ಅಂಗಗಳನ್ನು ನೆರವೇರಿಸಬೇಕು.

ವಿನಾಯಕನಿಗೆ ಮೋದಕ ಹಾಗೂ ಅಪೂಪ (ಪೂಅ) ಗಳನ್ನು ನೈವೇದ್ಯವಾಗಿ ಅರ್ಪಿಸಬೇಕೆಂದು ಬೌಧಾಯನ ಸೂತ್ರಗಳಲ್ಲಿ ತಿಳಿಸಲಾಗಿದೆ. ಇದರಲ್ಲಿ ವಿನಾಯಕನನ್ನು ಭೂತನಾಥ, ವಿಘ್ನೇಶ್ವರ, ಹಸ್ತಿಮುಖ - ಇತ್ಯಾದಿಯಾಗಿ ಸಂಬೋಧಿಸಲಾಗಿದೆ.

ಕ್ರಿ.ಶ. ಮೂರನೇ ಶತಮಾನಕ್ಕೆ ಸೇರಿದ 'ಯಾಜ್ಞವಲ್ಕ್ಯ ಸ್ಮೃತಿ'ಯಲ್ಲಿ ಬ್ರಹ್ಮಾ ಹಾಗೂ ರುದ್ರರು ತಮ್ಮ ಅನುಚರರ ಮೇಲುಸ್ತುವಾರಿಗಾಗಿ ನಾಲ್ವರು ವಿನಾಯಕರುಗಳನ್ನು ನೇಮಿಸಿದರು ಎಂದು ತಿಳಿಸಲಾಗಿದೆ.

ಶಬ್ದಾರ್ಥದ ದೃಷ್ಟಿಯಿಂದ ವಿನಾಯಕ ಎಂದರೆ ಆಳುವ ಇಲ್ಲವೆ ನೇತಾರನಾಗಿರುವ ವ್ಯಕ್ತಿ ಎಂದರ್ಥ. ಸುಮಾರು ೨೮೧ ವಿನಾಯಕರು ಇರುವುದನ್ನು ನಾವು ಕಾಣುತ್ತೇವೆ. ಈ ವಿನಾಯಕರು ಉಪಕಾರ ಬುದ್ಧಿಯುಳ್ಳವರೂ, ಧರ್ಮ ಬುದ್ಧಿಯುಳ್ಳವರೂ ಆದ ದೇವರುಗಳಾಗಿರಲಿಲ್ಲ. ಬದಲಾಗಿ ಅವರು ಸ್ವಾಭಾವಿಕವಾಗಿ ತೊಂದರೆಗಳನ್ನು ಉಂಟುಮಾಡುವ, ಅಡ್ಡಿಗಳನ್ನು ತಂದೊಡ್ಡುವ, ಕ್ರೋಧೆಯನ್ನು ಉಂಟುಮಾಡುವವರಾಗಿದ್ದರು. ಅವರ ಶಕ್ತಿಗಳು ತುಂಬಾ ಮಿತವಾಗಿದ್ದುವು. ಅವರು ಜನರಿಗೆ ದೇಕಿಲ್ಲದವರಾಗಿದ್ದರು. ಅವರನ್ನು ದೂರ ಮಾಡುವ ಪ್ರಯತ್ನಗಳನ್ನೂ ನಡೆಸಲಾಗಿತ್ತು.

ಭಾಗವತ ಮಹಾಪುರಾಣದಲ್ಲಿ ವಿನಾಯಕರುಗಳನ್ನು ಡಾಕಿಣಿ, ಶಾಕಿಣಿ, ಯಾತುಧಾನ, ಭೂತ, ಪ್ರೇತ, ಪಿಶಾಚ, ಯಕ್ಷ, ರಾಕ್ಷಸ ಇತ್ಯಾದಿ ದುಷ್ಟ ಶಕ್ತಿಗಳ ನಡುವೆ ಸೇರಿಸಲಾಗಿದೆ. ಶಿಶುಗಳಿಗೆ ರೋಗಗಳನ್ನು ನೀಡುವ, ಅವುಗಳನ್ನು ಕಾಡುವ ಅರ್ಭಕ ಗ್ರಹಗಳನ್ನಾಗಿ ಪರಿಗಣಿಸಲಾಗಿತ್ತು.

ಮಹಾಭಾರತದ ಭಾಗವಾದ ಹರಿವಂಶಪುರಾಣವೂ ಕೂಡ 'ರಾಕ್ಷಸಾಶ್ಚ ಪಿಶಾಚಾಶ್ಚ ಭೂತಾನಿ ಚ ವಿನಾಯಕಾಃ' ಎಂದು ಹೇಳುತ್ತದೆ.

ಆದುದರಿಂದ ಪ್ರಾರಂಭಿಕ ಹಂತದಲ್ಲಿ ಮಕ್ಕಳಿಗೆ ಅತ್ಯುಗ್ರ ರೋಗಗಳನ್ನು ಉಂಟುಮಾಡಿ, ಅವರಿಗೆ ಸಾವನ್ನು ನೀಡುವ ದುಷ್ಟಶಕ್ತಿಗಳನ್ನಾಗಿ ವಿನಾಯಕರನ್ನು ಪರಿಗಣಿಸಲಾಗಿತ್ತು. ಬಾಲಕನಾಗಿರುವಾಗಲೇ ಕೃಷ್ಣನನ್ನು ಕೊಲ್ಲಲು ಪ್ರಯತ್ನಿಸಿದ ಪೂತನಿಯು ಮೂಲತಃ ವಿನಾಯಕಳ ಗುಂಪಿಗೇ ಸೇರಿದವಳಾಗಿರುತ್ತಾಳೆ. ಈ ರೀತಿಯಲ್ಲಿ ಅವರುಗಳು ಯಾವುದೇ ಪುಣ್ಯಕರ ಕಾರ್ಯವನ್ನು ನೆರವೇರಿಸುವಾಗಲೂ ಕೂಡ ವಿವಿಧ ವಿಘ್ನಗಳನ್ನು ಸೃಷ್ಟಿ ಮಾಡುತ್ತಿದ್ದರು.

ರಾಮಾಯಣದ ತಾಟಕಿಯ ಪ್ರಸಂಗವೂ ಕೂಡ ಇಂತಹುದೇ ವರ್ಗಕ್ಕೆ ಸೇರಿದ್ದಾಗಿರುತ್ತದೆ.

ಇಂತಹ ವಿನಾಯಕರುಗಳ ನಾಯಕನನ್ನು 'ವಿನಾಯಕ ಗಣಪತಿ' ಎಂದು ಕರೆಯುತ್ತಾರೆ.



# ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ
## ಶ್ರೀನಿವಾಸ ಮಂಗಾಪುರ

# ನೂತನ ಆರ್ಜಿತ ಸೇವೆಗಳು

ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂದಣಿಯ ಅಪೇಕ್ಷೆಯಂತೆ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಎರಡು ಹೊಸ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳೆಂದರೆ -

### 1. ಶ್ರೀನಿವಾಸ ಅರ್ಚನಾ ದತ್ತಿಯೋಜನೆ :

ಹತ್ತು ವರ್ಷ ಕಾಲ ರೂ. 5000/- ದತ್ತಿ ನೀಡುವವರ ಅಪೇಕ್ಷೆಯ ದಿನದಂದು ವರ್ಷಕ್ಕೆ ಒಮ್ಮೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಗೆ ಅರ್ಚನೆ ಮಾಡುವ ಅವಕಾಶ. ಈ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿಡಲಾಗುವುದು.

* ಈ ಸೇವೆಯಲ್ಲಿ ವ್ಯಕ್ತಿ, ಸಂಘ, ಸಂಸ್ಥೆಯ ಹೆಸರಿನಲ್ಲಿ ಅರ್ಚನೆ ನಡೆಸಬಹುದು.
* ದತ್ತಿ ನೀಡುವವರಿಗೆ ಅರ್ಚನೆಯ ದಿನವನ್ನು ನಿರ್ಧರಿಸುವ ಅವಕಾಶವಿದೆ.
* ದತ್ತಿ ನೀಡುವವರ ವರ್ಷಕ್ಕೆ ಒಮ್ಮೆ ಆಯ್ಕೆಯ ದಿನದಂದು ಅವರ ಕುಟುಂಬದ ಐದುಮಂದಿಗೆ ಅಷ್ಟೋತ್ತರ ಸಹಸ್ರನಾಮಾರ್ಚನೆಯ ವೇಳೆಯಲ್ಲಿ ಉಚಿತ ದರ್ಶನ ವುಂಟು.
* ಈ ಯೋಜನೆಯನ್ವಯ ದತ್ತಿ ನೀಡುವವರಿಗೆ ಒಂದು ಅಂಗವಸ್ತ್ರ, ಒಂದು ಕುಪ್ಪಸದ ಕಣದ ಬಹುಮಾನವುಂಟು.
* ಈ ದತ್ತಿಯನ್ವಯ ಅರ್ಚನಸೇವೆ ಹತ್ತು ವರ್ಷಕ್ಕೆ ಸೀಮಿತ.

### 2. ಅಭಿಷೇಕಾನಂತರ ವಸ್ತ್ರಾಲಂಕರಣ ಸೇವೆ :

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಶುಕ್ರವಾರಾಭಿಷೇಕದ ನಂತರ ವಸ್ತ್ರಾಲಂಕರಣಕ್ಕಾಗಿ ಭಕ್ತರು ವಸ್ತ್ರಕಾಣಿಕೆ ನೀಡುವುದು ಪದ್ಧತಿ. ಈ ದಿನಗಳಲ್ಲಿ ಹೆಚ್ಚಿರುವ ಯಾತ್ರಿಕ ಸಂದಣಿಯಿಂದಾಗಿ ಈ ವಸ್ತ್ರಕಾಣಿಗೆ ನೀಡಬಯಸುವ ಗೃಹಸ್ಥರು ಐದು ವರ್ಷಗಳಿಗೂ ಹೆಚ್ಚುಕಾಲ ಕಾಯಬೇಕಾಗುತ್ತದೆ. ಇಂತಹದೇ ವಸ್ತ್ರಕಾಣಿಕೆಯನ್ನು ಶ್ರೀನಿವಾಸ ಮಂಗಾಪುರದಲ್ಲೂ ಈಗ ಸ್ವೀಕರಿಸಲಾಗುವ ವಸ್ತ್ರಾಲಂಕರಣ ಸೇವೆಯನ್ನು ಪ್ರವೇಶಗೊಳಿಸಲಾಗಿದೆ.

* ಈ ಸೇವೆಯಲ್ಲಿ ತಿರುಮಲೆಯಲ್ಲಿಯಂತೆಯೇ ಪ್ರತಿ ಶುಕ್ರವಾರವೂ ಅಭಿಷೇಕಾನಂತರ ಸ್ವಾಮಿಗೆ ನೂತನ ಮೇಲ್ಚಾತ್ ಹಾಗೂ ಉತ್ತರೀಯದಿಂದ ಅಲಂಕರಣ ನಡೆಸಲಾಗುವುದು.
* ಭಕ್ತರಿಂದ ಈ ಸೇವೆಗಾಗಿ ವಸ್ತ್ರವನ್ನು (ಮೇಲ್ಚಾತ್ ಹಾಗೂ ಉತ್ತರೀಯ) ಅಥವಾ ಅದರ ಬೆಲೆ ರೂ. 15000/- ಸ್ವೀಕರಿಸಲಾಗುವುದು.
* ತಿರುಮಲೆಯಲ್ಲಿ ನಂತೆಯೇ ಭಕ್ತರ ಕಡೆಯ ಐದು ಮಂದಿಗೆ ಅಭಿಷೇಕ ದರ್ಶನದ ಏರ್ಪಾಡು ಮಾಡಲಾಗುವುದು.
* ಅಭಿಷೇಕಾನಂತರ ಗೃಹಸ್ಥರಿಗೆ ಒಂದು ಅಂಗವಸ್ತ್ರ ಹಾಗೂ ಒಂದು ಕುಪ್ಪಸದ ಕಣವನ್ನು ಬಹೂಕರಿಸಲಾಗುವುದು.

ಯಾತ್ರಿಕರು ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ಈ ಸೇವೆಗಳಲ್ಲಿ ಭಾಗವಹಿಸಿ ಅನುಕೂಲಗಳನ್ನು ಪಡೆಯಬಹುದಾಗಿದೆ.

**ತಿ.ತಿ.ದೇ.**

ಈ ರೀತಿಯಲ್ಲಿ ದುಷ್ಪತನ ಪ್ರತೀಕವಾಗಿದ್ದ ಈ ಶಕ್ತಿಗಳು ಪೂಜಿಸಲ್ಪಡುವ ಸ್ಥಾನವನ್ನು ಪಡೆಯಲ ತೆಗೆದುಕೊಂಡ ದೀರ್ಘ ಹಾಗೂ ಕಷ್ಟಕರ ಪ್ರಯಾ ಣದ ಬಗ್ಗೆ ವಿಸ್ತೃತ ಸಂಶೋಧನೆಯನ್ನು ನಡೆಸು ವುದು ಅತ್ಯಗತ್ಯ. ಹೀಗೆ ಮಾಡಿದ್ದೇ ಆದರೆ ಅನೇ ಕುತೂಹಲ ವಿಷಯಗಳೂ ಬೆಳಕು ಕಾಣುವುದರಲ್ಲಿ ಅನುಮಾನವೇ ಇಲ್ಲ.

ತುಳಸೀದಾಸರಂತಹ ಮಹಾನ್ ಶ್ರೀರಾಮಭ ಕ್ತರೆ ಇವರುಗಳನ್ನು--

ಸಿದ್ಧಿ-ಸದನ, ಗಜ-ವದನ, ವಿನಾಯಕ<br>
ಕೃಪಾ-ಸಿಂಧು, ಸುಂದರ್, ಸಬ್-ಲಾಯಕ್

ಎಂದು ಹೊಗಳುವ ಮಟ್ಟವನ್ನು ಮುಟ್ಟಬೇಕಾ ದರೆ, ವಿನಾಯಕರುಗಳಲ್ಲಿ ಉಂಟಾಗಿರುವ ಬದ ಲಾವಣೆಯು ಕ್ರಾಂತಿಕಾರಕವಾದುದೆಂದೇ ಭಾವಿಸ ಬೇಕು.

ವಿನಾಯಕರುಗಳ ದುಷ್ಟಸ್ವಭಾವದ ಬಗ್ಗೆ ವರಾ ಹಪುರಾಣದಲ್ಲಿ ಉಲ್ಲೇಖವಿದೆ. ಅವರುಗಳನ್ನು ನಷ್ಟಗಳ ಕಾರಕ, ತೊಂದರೆಗಳ ಉಪದ್ರವಗಳನ್ನು ಉಂಟುಮಾಡುವವರು, ಅಡಿತಡೆಗಳನ್ನು ಉಂಟು ಮಾಡುವ, ಭಯ, ದಿಗುಲನ್ನು ಹುಟ್ಟಿಸುವ ಭಯೋ ತ್ಪಾದಕರೆಂದೇ ಕರೆಯಲಾಗಿದೆ. ಹೀಗಿದ್ದ ಇವರು ಗಳು ಉತ್ತಮರು ಹೇಗಾದರು ಎನ್ನುವುದೇ ಕುತೂ ಹಲಕರವಾದ ವಿಷಯ.

ಹೀಗೆಂದು ಹೇಳಲಾಗುತ್ತದೆ - ಒಮ್ಮೆ ಭಗ ವಾನ್ ಪರಮೇಶ್ವರನು ಜೋರಾಗಿ ನಕ್ಕನಂತೆ ಹಾಗೆ ನಕ್ಕಾಗ ಅತ್ಯಂತ ಆಕರ್ಷಕನೂ, ಸುಂ ರನೂ ಆದ ಬಾಲಕನೋರ್ವನು ಸೃಷ್ಟಿಯಾದ ನಂತೆ. ಅವನೇ ಗಣೇಶ. ಆ ಮಗುವಿನಿಂ ಆಕರ್ಷಿತಳಾದ ಪಾರ್ವತಿಯು ಒಂದೇ ಸಮನಾಗಿ ರೆಪ್ಪೆಯನ್ನು ಆಡಿಸದೆ ಗಣೇಶನನ್ನು ನೋಡತೊ ಡಗಿದಳಂತೆ. ಇದನ್ನು ಪರಮೇಶ್ವರನು ಇಷ್ಟಪ ಡಲಿಲ್ಲ. ಆಗ ಆ ಬಾಲಕನು ಗಜಾನನನಾಗಲಿ ಲಂಬೋದರನಾಗಲಿ ಎಂದು ಪರಮೇಶ್ವರನು ಶ ಸಿದನಂತೆ, ಕೂಡಲೇ ಆ ಮಗುವು ವಿಕಾರ ಆಕಾ ವನ್ನು ಪಡೆಯಿತು. ಮುಖವು ಆನೆಯ ಮುಖ ದಂತೆ ಪರಿವರ್ತಿತವಾಯಿತು. ಹೊಟ್ಟೆಯು ಡೊಳ ಹೊಟ್ಟೆಯಾಯಿತು. ಆದರೂ ಪರಮೇಶ್ವರನು ಬಾಲಕನಿಂದ ಆಕರ್ಷಿತನಾಗಿ, ಸಂತೋಷಗೊಂಡ ನೋಡಿದ. ನಂತರದಲ್ಲಿ ಆ ಮಗನ ಮೇ ಅನುಕಂಪಗೊಂಡು, ಅವನನ್ನು ತನ್ನ ಭೂತಗ ಗಳ ಹಾಗೂ ವಿನಾಯಕರುಗಳ ನಾಯಕನನ್ನಾ ನಿಯಮಿಸಿದ. ಅಂತೆಯೇ ಆತನಿಗೆ ಪ್ರಧಾನ ಸ್ಥಾ

ವನ್ನು ಈ ರೀತಿಯಲ್ಲಿ ನೀಡಿ, ದೇವದಾನವರಾಗಲಿ, ಮಾನವರಾಗಲಿ ಶುಭಕಾರ್ಯವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಆತನನ್ನು ಮೊಟ್ಟಮೊದಲು ಪೂಜಿಸಿ, ನಂತರ ಉಳಿದ ಕಾರ್ಯಗಳನ್ನು ಮಾಡಬೇಕು-ಎನ್ನುವ ವರವನ್ನು ನೀಡಿದ. ಗಣೇಶನನ್ನು ಈ ರೀತಿಯಲ್ಲಿ ಪೂಜಿಸದಿದ್ದಲ್ಲಿ, ಅವರು ಯಾರೇ ಆಗಿರಲಿ ಅಪಜಯಗೊಳ್ಳುವುದು ಖಂಡಿತ.

ಭಗವಾನ್ ಪರಮೇಶ್ವರನಿಂದ ಈ ರೀತಿಯ ಆಜ್ಞೆಯು ಹೊರಟಿತು. ಅಂದಿನಿಂದ ಗಣಪತಿಯು ವಿಘ್ನರಾಜನಾದನು, ಎಲ್ಲ ವಿಘ್ನಗಳನ್ನೂ ದೂರ ಮಾಡುವವನಾದನು.

ಇದೇ ರೀತಿಯಲ್ಲಿ ಮತ್ತೂ ಒಂದು ಕಥೆಯಿದೆ. ಇದು ಸ್ಕಾಂದಪುರಾಣದಲ್ಲಿದೆ. ಅದು ದ್ವಾಪರಯುಗದ ಕೊನೆ ಹಾಗೂ ಕಲಿಯುಗದ ಪ್ರಾರಂಭ. ಆ ಸಮಯದಲ್ಲಿ ಪಾಪಿಗಳಾದ ಮ್ಲೇಚ್ಛರೂ, ಅಧರ್ಮಿಗಳೂ, ಮತ್ತಿತರರೂ ಕೂಡ ಸೋಮನಾಥದಲ್ಲಿನ ಜ್ಯೋತಿರ್ಲಿಂಗವನ್ನು ದರ್ಶಿಸಿ, ಸ್ವರ್ಗವನ್ನು ತಲುಪಿ, ಮುಕ್ತಿ ಪಡೆದರಂತೆ. ಇದರಿಂದ ಸ್ವರ್ಗದಲ್ಲಿ ಜನಸಮ್ಮರ್ದನ ಹೆಚ್ಚಾಗಿ, ದೇವತೆಗಳು ಓಡಾಡುವುದೇ ಕಷ್ಟವಾಯಿತಂತೆ. ಈ ಸನ್ನಿವೇಶವನ್ನು ದೂರಮಾಡಲು, ದೇವತೆಗಳು ಜಗಜ್ಜನನಿ ಪಾರ್ವತಿಯನ್ನು ಸಂಧಿಸಿ, ಈ ಸಮಸ್ಯೆಯನ್ನು ಪರಿಹರಿಸುವಂತೆ ಬೇಡಿಕೊಂಡರು. ಅನಗತ್ಯ ಜನರು ಸ್ವರ್ಗವನ್ನು ಪ್ರವೇಶಿಸದಂತೆ ಮಾಡಬೇಕೆಂದು ವಿನಂತಿಸಿದರು.

ಸ್ವಲ್ಪ ಹೊತ್ತು ಯೋಚನೆ ಮಾಡಿದ ಪಾರ್ವತಿಯು ತನ್ನ ದೇಹದಿಂದ ಗಜಮುಖದ ವಿನಾಯಕನನ್ನು ಸೃಷ್ಟಿಮಾಡಿದಳು. ಅಂತೆಯೇ ಜನರ ನಡುವೆ ದುರಾಸೆ, ಕಾಮಕ್ರೋಧಾದಿಗಳು, ಇತರೇ ದುಷ್ಟಗುಣಗಳನ್ನು ಸೃಷ್ಟಿಮಾಡಿ, ಅವುಗಳಿಂದ ಜನರು ಆಕರ್ಷಿತರಾಗಿ, ದುಷ್ಟತನವನ್ನು ಹೆಚ್ಚಿಸಿಕೊಂಡು, ಹೆಚ್ಚು ಹೆಚ್ಚು ಪಾಪಿಷ್ಟರಾಗುವಂತೆ ಮಾಡಲು ಅವನಿಗೆ ಸೂಚನೆ ನೀಡಿದಳು. ಇದರಿಂದ ಜನರು ಹೆಚ್ಚು ಹೆಚ್ಚು ಪಾಪಿಗಳಾಗಿ, ವೈಕುಂಠಲೋಕಕ್ಕೆ ಹೋಗುವವರ ಸಂಖ್ಯೆ ಕಡಿಮೆಯಾಗಲಿ ಎಂಬ ಭಾವ ಉಂಟುಮಾಡಿದಳು. ಇವೆಲ್ಲವನ್ನೂ ದಾಟಿ, ತಮ್ಮ ಉತ್ತಮ ಗುಣಗಳಿಂದ ಪುಣ್ಯಪಡೆದು, ಸ್ವರ್ಗ ತಲುಪುವವರು ಕಡಿಮೆಯಾದರು. ಇದರಿಂದ ಸ್ವರ್ಗಕ್ಕೆ ಹೋಗುವವರು ಕಡಿಮೆಯಾದರು. ದೇವತೆಗಳು ಇದನ್ನು ಗಮನಿಸಿ ಸಂತೋಷಗೊಂಡರು.

ಇದೇ ಭಾವವನ್ನು ನಾವು ಪುರಾಣಗಳಲ್ಲಿಯೂ ಕಾಣುತ್ತೇವೆ. ವಿನಾಯಕರು ಮೂಲತಃ ಅಡಿತಡೆಗಳನ್ನು ಉಂಟುಮಾಡುವ ಏಜೆಂಟುಗಳಾಗಿದ್ದರಂತೆ,



ಅವುಗಳನ್ನು ದೂರಮಾಡುತ್ತಿರಲಿಲ್ಲವಂತೆ. ಅದರಿಂದಲೇ ಅವರನ್ನು ಪೂತನರು, ಡಾಕಿನಿಯರು, ಯಕ್ಷರು, ಪಿಶಾಚಗಳು, ಬ್ರಹ್ಮರಾಕ್ಷಸರೊಂದಿಗೆ ಸೇರಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ.

ಮೇಲೆ ತಿಳಿಸಿದ ಪರಿಸ್ಥಿತಿಗಳ ಪರಿಣಾಮವಾಗಿ ವಿನಾಯಕರು ಸುಧಾರಣೆಗೊಂಡು, ದೇವರುಗಳ ಪರಂಪರೆಯಲ್ಲಿ ಸೇರಿಹೋದರು.

ವಿನಾಯಕರುಗಳ ಇದೇ ದುಷ್ಟರೂಪವನ್ನು ನೇಪಾಳದಲ್ಲಿಯೂ ಗುರ್ತಿಸಲಾಗಿದೆ. ಟಿಬೆಟ್‌ನಲ್ಲಿಯೂ ವಿನಾಯಕರುಗಳನ್ನು ದುಷ್ಟಶಕ್ತಿಗಳೆಂದೇ ಪರಿಗಣಿಸಲಾಗಿದೆ. ಬೌದ್ಧ ತಾಂತ್ರಿಕ ಪರಂಪರೆಯು ಇದನ್ನು ಎತ್ತಿಹಿಡಿದಿದೆ. ಬೌದ್ಧಗ್ರಂಥಗಳಲ್ಲಿ ಇದರ ಬಗ್ಗೆ ವಿವರಗಳಿವೆ.

ಸಾಧಕನೊಬ್ಬ ನಿದ್ದನಂತೆ. ತನ್ನ ಗುರಿಯನ್ನು ಸಾಧಿಸುವುದಕ್ಕಾಗಿ ತಪಸ್ಸು ಮಾಡುತ್ತಿದ್ದನಂತೆ. ಇದಕ್ಕೆ ಗಣೇಶನು ನಿರಂತರವಾಗಿ ಅಡ್ಡಿಗಳನ್ನು ಒಡ್ಡುತ್ತಿದ್ದನಂತೆ. ಇದರಿಂದ ಬೇಸರಗೊಂಡ ಆ ಸಾಧಕನು ವಿಘ್ನಾಂತಕನ ಪೂಜೆಯನ್ನು ನೆರವೇರಿಸಿದನಂತೆ. ಸಾಧಕನಿಂದ ಈ ರೀತಿಯಲ್ಲಿ ಪ್ರಸನ್ನಗೊಂಡ ವಿಘ್ನಾಂತಕನು ವಿಘ್ನರಾಜಗಣೇಶನನ್ನು ದಮನ ಮಾಡಿ, ತನ್ನ ಭಕ್ತನ ಕೋರಿಕೆಯನ್ನು ಈಡೇರಿಸಿದನಂತೆ.

ಈಗಲೂ ನೇಪಾಳದಲ್ಲಿ ಕೆಲವು ಕಡೆ ವಿಘ್ನರಾಜ ಗಣೇಶನ ಮೇಲೆ ಸವಾರಿ ಮಾಡುತ್ತಿರುವ ವಿಘ್ನಾಂತಕನ ವಿಗ್ರಹಗಳಿರುವುದನ್ನು ಕಾಣಬಹುದು. ಟಿಬೆಟ್‌ನಲ್ಲಿ ಈ ತರಹದ ವಿಗ್ರಹಗಳಿವೆ.

ಬೌದ್ಧಮತೀಯ ತಾಂತ್ರಿಕತೆಗೆ ಸಂಬಂಧಪಟ್ಟ 'ಸಾಧನಮಾಲಾ' ಎನ್ನುವ ಗ್ರಂಥದಲ್ಲಿ ಗಣಪತಿಯನ್ನು ಅಡಚಣೆಗಳ ಪರ್ಯಾಯವನ್ನಾಗಿ ಉಪಯೋಗಿಸಲಾಗಿದೆ.

ವರಾಹ ಪುರಾಣದಲ್ಲಿ ಗಣೇಶನನ್ನು ಹೊಗಳುವ 'ನಮೋಸ್ತುತೇ ವಿಘ್ನಕರ್ತ್ರೇ' ಎಂಬ ಸಾಲಿದೆ. ವಿನಾಯಕನಿಗೆ ಸಮಾನಾರ್ಥಪದಗಳನ್ನು ನೀಡುತ್ತಾ, ಅಮರಕೋಶವು 'ವಿನಾಯಕೊ ವಿಘ್ನರಾಜೊ ದ್ವೈಮಾತುರ ಗಣಾಧಿಪಃ' ಎಂದು ತಿಳಿಸಿದೆ. ಅಂದರೆ ಗಣೇಶನ ರೂಪದ ವಿಘ್ನರಾಜನು ಸಾಮಾಜಿಕ ಯೋಚನಾಲಹರಿಯಲ್ಲಿ ಅಮರಕೋಶದ ಕಾಲದಲ್ಲಿ ಪ್ರಚಲಿತನಾಗಿದ್ದನೆಂದು ತಿಳಿದುಬರುತ್ತದೆ.

ಒಟ್ಟಿನಲ್ಲಿ ವಿನಾಯಕನ ನೈಜ ಮೂಲರೂಪವು ಈ ರೀತಿ ಇದೆ. ಅವನು ಯಾರಿಗೂ ಬೇಡವಾದವನು, ನೋಡಲು ತುಂಬಾ ಭಯಂಕರನು, ಶಾಂತಿ ಭಂಗ ಮಾಡಿ, ಕ್ಷೋಭೆಗೊಳಿಸುವವನು, ಜಯವನ್ನು ತಡೆ ಹಿಡಿಯುವವನಾಗಿರುತ್ತಾನೆ.

ಡಾ|| ಸಂಪೂರ್ಣಾನಂದರು 'ಗಣೇಶ' ಎನ್ನುವ ತಮ್ಮ ಪುಸ್ತಕದಲ್ಲಿ ಈ ವಿನಾಯಕರುಗಳ ವಿವರಗಳನ್ನು ಬಹಳಷ್ಟು ವಿವರವಾಗಿ ನೀಡಿ, ಅವರ ಚಿತ್ರಗಳನ್ನೂ ನೀಡಿದ್ದಾರೆ. ಹಿಂದೂ ದೇವರುಗಳ ಪರಂಪರೆಯಲ್ಲಿ ಈ ವಿನಾಯಕರುಗಳ ಸ್ಥಾನ, ರೂಪ ಆಕಾರ ಇತ್ಯಾದಿಗಳ ಕಾಲಕ್ರಮದ ಬೆಳವಣಿಗೆಯನ್ನು ಗುರ್ತಿಸಿದ್ದಾರೆ.

ಒಟ್ಟಿನಲ್ಲಿ ಈ ವಿನಾಯಕರುಗಳ ಬಗ್ಗೆ ಹೇಳುವುದಾದರೆ ಪ್ರಾರಂಭದ ದಿನಗಳಲ್ಲಿ ಈ ವಿನಾಯಕರುಗಳು ಸುಂದರರೂ, ಆಕರ್ಷಕರೂ ಆಗಿರಲಿಲ್ಲ. ಅವರುಗಳು ನೋಡುವುದಕ್ಕೂ ಚನ್ನಾಗಿರಲಿಲ್ಲ, ಸ್ವಭಾವದಲ್ಲೂ ಉತ್ತಮ ರಿರಲಿಲ್ಲ. ಅವರುಗಳು ಕಷ್ಟಗಳನ್ನು ನೀಡುವುದರ ಕಡೆಯೇ ಹೆಚ್ಚು ಗಮನ ಕೊಡುತ್ತಿದ್ದರು.

ಇಷ್ಟಾದರೂ ಕೂಡ ಎರಡು ಅನುಮಾನಗಳು ಹಾಗೆಯೇ ಇಂದಿಗೂ ಉಳಿದಿವೆ–

೧. ವಿನಾಯಕರುಗಳ ಸಂಖ್ಯೆಯು ಗಣೇಶ ಎನ್ನುವ ಒಂದು ಸಂಖ್ಯೆಗೆ ಇಳಿದುದ್ದು ಹೇಗೆ?

೨. ಈ ವಿನಾಯಕರುಗಳು ತಮ್ಮ ನಡತೆಯನ್ನು ಬದಲಾಯಿಸಿಕೊಂಡು, ಉಪಕಾರ ಮಾಡುವ ಸ್ವಭಾವವನ್ನು ಹೇಗೆ ಪಡೆದುವು?

ಒಂದಂತೂ ಸತ್ಯ ಈ ವಿನಾಯಕರುಗಳ ದುಷ್ಟ ಬುದ್ಧಿಯು ಈ ವರೆಗೂ ಕಡಿಮೆಯಾಗಿಲ್ಲ. ಹಿಂದೂ ಪೂಜೆಗಳಲ್ಲಿ 'ಅವಿಘ್ನ ಪೂಜೆ' ಎನ್ನುವುದು ಒಂದು ಮುಖ್ಯವಾದ ಪೂಜೆಯಾಗಿದೆ.

ಈ 'ಅವಿಘ್ನ ಪೂಜೆ'ಯಲ್ಲಿ ಆರು ಹಾನಿಕಾರಕ ವಿನಾಯಕರುಗಳನ್ನು ಸ್ಥಾಪನೆ ಮಾಡಿ, ಪ್ರಾರ್ಥಿಸಿ, ಪೂಜಿಸಲಾಗುವುದು. ಈ ಆರು ವಿನಾಯಕರುಗಳ ಹೆಸರುಗಳೆಂದರೆ-೧) ಮೋದ, ೨) ಪ್ರಮೋದ, ೩) ಸುಮುಖ, ೪) ದುರ್ಮುಖ, ೫) ಅವಿಘ್ನ ಹಾಗೂ ೬) ವಿಘ್ನಹರ್ತ.

ಗಣೇಶನನ್ನು ಪೂಜಿಸುವ ರೀತಿಗಿಂತಲೂ ಭಿನ್ನವಾದುದು. ಇವರುಗಳ ಪೂಜೆ.

ಇವರಿಂದ ತಿಳಿದುಬರುವ ಅಂಶವೆಂದರೆ ಪ್ರಾರಂಭದಿಂದಲೂ ಗಣೇಶ ಹಾಗೂ ವಿನಾಯಕರುಗಳು ಬೇರೆ ಬೇರೆ ಎಂಬುದಾಗಿ ಗಣಿಸಲ್ಪಟ್ಟಿರುವುದು. ಇವೆರಡೂ ಭಿನ್ನ ಒಂದಂತೂ ಅಲ್ಲವೇ ಅಲ್ಲ.

ಆದರೆ ಸಾಮಾಜಿಕದಲ್ಲಿ ಇಂದಿಗೂ ಓರ್ವ ದುಷ್ಟವ್ಯಕ್ತಿಯು ಸಂತೋಷಗೊಳ್ಳುವಂತಾದರೆ ಅವನು ರಕ್ಷಕನಾಗಿಯೂ ಮಾರ್ಪಾಟಾಗಬಲ್ಲ ಎಂಬುದನ್ನು ಕಂಡುಕೊಂಡಿದ್ದೇವೆ.

ಅಂತೆಯೇ ವಿಘ್ನಗಳನ್ನು ಉಂಟುಮಾಡುವ, ವಿಘ್ನಗಳನ್ನು ದೂರಮಾಡುವ ವಿನಾಯಕನ ರೂಪಗಳು ಒಂದರ ಪಕ್ಕದಲ್ಲೊಂದು ಪ್ರಸ್ತುತವಾಗಿದ್ದು, ಚಾಲನೆಯಲ್ಲಿದ್ದು, ನಿಧಾನ ನಿಧಾನವಾಗಿ ವಿನಾಯಕನ ಗುಣವಿಶೇಷಗಳಾದ ದುಷ್ಟಗುಣಗಳು ಕಡಿಮೆಯಾಗಿ, ಕಡೆಗೆ ಕಣ್ಮರೆಯಾಗಿ, ಎಲ್ಲ ಕೆಟ್ಟಿತನಗಳಿಂದ ದೂರವಾದ, ಪವಿತ್ರವಾದ ಗಣೇಶನು ಜನ್ಮತಾಳಿರಬಹುದು ಎಂದು ಊಹಿಸಲಾಗಿದೆ.

ಶಿವಪುರಾಣದಲ್ಲಿನ ಗಣೇಶನ ಕಥೆಯು ಜನಪ್ರಿಯವಾದುದು. ಪಾರ್ವತಿಯ ದೇಹದ ಕೊಳೆಯಿಂದ ಗಣೇಶನ ಸೃಷ್ಟಿ, ಆಕೆಯ ಸ್ನಾನಗೃಹದ ಬಾಗಿಲು ಕಾಯುವಿಕೆ, ಶಿವನು ಆ ಮಗುವಿನ ತಲೆಯನ್ನು ತ್ರಿಶೂಲದಿಂದ ಕತ್ತರಿಸುವಿಕೆ, ನಂತರ ಆನೆಯ ತಲೆಯನ್ನಿಟ್ಟು ಆ ಮಗುವನ್ನು ಜೀವಂತಗೊಳಿಸುವಿಕೆ, ನಂತರ ಅವನನ್ನು ಗಣಾಧ್ಯಕ್ಷನಾಗಿ ನಿಯುಕ್ತಗೊಳಿಸುವಿಕೆ, ತದನಂತರದಲ್ಲಿ ಅವನನ್ನು ವಿಘ್ನಹರ್ತನನ್ನಾಗಿ ರೂಪಿಸುವಿಕೆ ಇತ್ಯಾದಿ ಕಥಾನಕಗಳಿಂದಲೂ ಗಣೇಶನ ಪಾರಮ್ಯತೆ ತಿಳಿದುಬರುತ್ತದೆ.

ಈ ರೀತಿಯಲ್ಲಿ ಗಣಪತಿಯ ಮೂಲ, ಬೆಳವಣಿಗೆ ಏನೇ ಇದ್ದರೂ, ಇಂದು ಪ್ರತಿಯೊಬ್ಬ ಹಿಂದುವಿಗೂ ತನ್ನ ಧಾರ್ಮಿಕ, ಸಾಮಾಜಿಕ ಹಾಗೂ ವಾಣಿಜ್ಯ ಕಾರ್ಯಕ್ರಮಗಳಲ್ಲಿ ಮೊದಲ ಪೂಜೆ ಸಲ್ಲುವುದು ಗಣೇಶನಿಗೇನೇ. ಇದಿಲ್ಲದೆ ಅವನಿಗೆ ಜಯವೆಂಬುದೇ ಇಲ್ಲ.

ಇಂದಿಗೂ ಎರಡು ರೀತಿಯ ಗಣೇಶಪೂಜೆಗಳು ನಡೆಯುತ್ತವೆ. ಎಲ್ಲ ತಡೆಗಳನ್ನು ನಿವಾರಿಸಿ ಜಯವನ್ನು ತಂದುಕೊಡುವುದು - ಒಂದು ರೀತಿಯ ಪೂಜೆಯಾದರೆ; ಅವನು ವಿದ್ಯೆಯ ಸಿದ್ಧಿ, ಲೌಕಿಕ ಐಶ್ವರ್ಯಪ್ರಾಪ್ತಿ ಹಾಗೂ ಉತ್ತಮಬುದ್ಧಿ ಕೊಡುವಂತಹ ಪೂಜೆ ಮತ್ತೊಂದು ರೀತಿಯದ್ದು.

ಜ್ಞಾನ ಸಾಗರನೂ, ವಿಘ್ನಕಾರಣನೂ ಆಗಿದ್ದರಿಂದಲೇ ತಮ್ಮ ರಚನಾಕಾರ್ಯ ಸುಗಮವಾಗಿ ನಡೆಯಲೆಂದು ಮಹಾ ಭಾರತದ ಕರ್ತ ವ್ಯಾಸಮಹರ್ಷಿಗಳು. ಗಣೇಶನ ಮುಖಾಂತರವೇ ತಮ್ಮ ಮೇರು ಕೃತಿಯನ್ನು ಬರೆಯಿಸಿದುದು. ಇದೇ ರೀತಿಯಲ್ಲಿ ಹಿಂದೀ ಸಾಹಿತ್ಯದ ಮಹಾನ್ ಬೆಳಕಾದ ಗೋಸ್ವಾಮಿ ತುಳಸೀದಾಸರೂ ಕೂಡ ತಮ್ಮ ಮಹಾನ್ ಕೃತಿ 'ರಾಮಚರಿತಮಾನಸ'ವನ್ನು ಬರೆಯುವುದಕ್ಕೆ ಮುಂಚೆ,

ವರ್ಣಾನಾಮರ್ಥ ಸಂಘಾನಾಂ
ರಸಾನಾಂ ಛಂದಸಾಮಪಿ
ಮಂಗಲಾನಾಂ ಚ ಕರ್ತಾರೌ
ವಂದೇ ವಾಣೀ ವಿನಾಯಕೌ

ಎಂದು ವಿನಾಯಕನನ್ನು ಸ್ತುತಿಸಿದ್ದಾರೆ.

(ಆಧಾರ)



## ತಿರುಮಲ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿಪನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

### ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯಸಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ:
ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ.



ಕಾರ್ಯನಿರ್ವಹಣಾಧಿಕಾರಿ

# ಮಹಾಜನರ ಕೈಂಕರ್ಯ

---ಎಸ್.ಕೆ. ರಾಮಚಂದ್ರರಾವ್. ಕೃಪೆ - ತಿರುಪತಿ ತಿಮ್ಮಪ್ಪ.

ಅರಸರ ಅಧಿಕಾರವೂ ಸಂಪತ್ತೂ ಕಡಮೆಯಾಗುತ್ತ ಬಂದು ಗುಡಿಗೆ ಉದಾರವಾಗಿ ನೀಡುವ ಸಾಮರ್ಥ್ಯ ಸಾಲದಾದಾಗ ಸಾಮಾನ್ಯಜನರು ಗುಡಿಯ ನೆರವಿಗೆ ಬಂದುದೊಂದು ಸ್ವಾರಸ್ಯ. ತಿರುಪತಿಯ ವರ್ತಕರು (ನಗರತ್ತರ್) ಯಾವಾಗಲೂ ಬೆಟ್ಟದ ದೇವರಿಗೆ ಉದಾರವಾಗಿ ಹಣವನ್ನು ಸಲ್ಲಿಸುತ್ತ ಬಂದಿದ್ದಾರೆ. ಈಗ ನಾವು ಪರಿಶೀಲಿಸುತ್ತಿರುವ ಕಾಲದಲ್ಲಿ ರಂಗಾಪುರಂ-ನಾರಾಯಣ-ಶೆಟ್ಟಿಯು ತನ್ನ ಕುಟುಂಬದ ಪರವಾಗಿ ಗುಡಿಯ ಶ್ರೀ ಭಂಡಾರಕ್ಕೆ ೪೮,೯೦೦ ನರ್-ಪಣಗಳನ್ನೂ, ಪೆಂಗಾಡ್ಯೆ ಶೆಟ್ಟಿಯ ಮಗ ಕಾಳತ್ತಿ-ಶೆಟ್ಟಿಯು ೧೦೮೫ ನರ್-ಪಣಗಳನ್ನೂ, ಕೋಪ್ಪ-ಶೆಟ್ಟಿಯು ೨,೦೦೦ ಪಣಗಳನ್ನೂ, ಪೆರಿಯ ಕೋನೇರಿ-ಶೆಟ್ಟಿಯು ೩.೨೦೦ ಪಣಗಳನ್ನೂ ಕೊಟ್ಟುದನ್ನು ಉದಾಹರಣೆಯಾಗಿ ಹೇಳಬಹುದು. ಗರ್ಭಗುಡಿಯಲ್ಲಿ ಪೂಜೆ ಮಾಡುವ ಅರ್ಚಕರು (ನಂಬಿಮಾರರು) ತಮ್ಮ ಕೊಡುಗೆಯಾಗಿ ಮೂರು ಸಾವಿರಕ್ಕೂ ಮೀರಿ ಪಣಗಳನ್ನು ಗುಡಿಗೆ ಸಲ್ಲಿಸಿದ ಉಲ್ಲೇಖವಿದೆ. ಮಲ್ಯೆ - ನಿಸ್ವಾನ್-ಭಟ್ಟರ ಮಗ ವೆಂಕಟತ್ತುರೈವಾರ್, ಪೆರಿಯ-ಪೆರುಮಾಳ್-ಭಟ್ಟರ್ ಅನಂತಪ್ಪರ್, ತಿರುವೆಂಕಟ ನಂಬಿಮಾರ್ ತಿಮ್ಮಯ್ಯರ್ ಮಗ ನಂಬಿಮಾರ್- ಶ್ರೀನಿವಾಸನ್, ಕರುಣಾಕರ-ಭಟ್ಟರ ಮಗ ಮಲ್ಯೆ-ನಿಸ್ರ-ಪೆರುಮಾಳ್, ತಿರುವೇಂಕಟಭಟ್ಟರ್- ಅಕ್ಕಣ್ಣನ್ ಮೊದಲಾದವರ ಹೆಸರುಗಳು ಈ ದಾನದಿಂದಾಗಿ ಉಳಿದು ಬಂದಿವೆ. ತಿರುಮಲೆಗುಡಿಯ ಆಚಾರ್ಯಪುರುಷರ ಮೂರೂ ಪಂಗಡದವರೂ (ಶೋಟ್ಟೈ - ಏಟ್ಟೂರು ಮನೆತನ, ಕಂದಾಡ್ಯೆ ಮನೆತನ ಮತ್ತು ಆನಂದಾಂಪಿಳ್ಳೈಮನೆತನ) ಮೂವತ್ತು ಸಾವಿರ ಪಣಗಳಷ್ಟು ವಾರ್ಷಿಕ ವರಮಾನವನ್ನು ಗುಡಿಗೆ ಈ ಅವಧಿಯಲ್ಲಿ ತಂದು ಕೊಟ್ಟರು.

ಗುಡಿಯಲ್ಲಿ ಲೆಕ್ಕ ಬರೆಯುತ್ತಿದ್ದ ತಿರುನಿಸ್ರ-ಊರ-ಉಡಯ್ಯಾನರು ಸೇರಿ ಹನ್ನೆರಡುಸಾವಿರ ಪಣಗಳಷ್ಟು ಸಂಪತ್ತನ್ನು ಗುಡಿಗೆ ಸೇರಿಸಿದರು. ಗುಡಿಯ ಕಾವಲುಗಾರರೆಲ್ಲ ಸೇರಿ ೧೫೪೬ ರಲ್ಲಿ ಯುಗಾದಿಯಂದು ಐನೂರ ಎಪ್ಪತ್ತು ಪಣಗಳನ್ನು ದೇವರಿಗೆ ಸಮರ್ಪಿಸಿದರೆನ್ನುವ ಶಾಸನವಿದೆ. ನಡೆಯದ ನಾಣ್ಯಗಳನ್ನು ದೇವರ ಕೊಪ್ಪರಕ್ಕೆ ಸುರಿಯುವ ಭಕ್ತರು ಆ ಕಾಲದಲ್ಲಿಯೂ ಇದ್ದರೆಂದು ತೋರುತ್ತದೆ. ಅದಕ್ಕಾಗಿಯೇ ಕೊಪ್ಪರದಲ್ಲಿ ಬಿದ್ದ ಹಣವನ್ನು ಚಲಾವಣೆಗೆ ಬರುವಂಥವೋ ಅಲ್ಲವೋ ಎಂದು ಪರೀಕ್ಷಿಸಲು 'ನೊಟ್ಟಕ್ಕಾರ'ರೆಂಬ ಅಧಿಕಾರಿಗಳನ್ನು ಗುಡಿಯ ಆಡಳಿತವು ನೇಮಿಸಿಕೊಳ್ಳಬೇಕಾಯಿತು. ಇಂಥ 'ನೋಟ್ಟಕ್ಕಾರ'ರೂ, ಗುಡಿಯ ಜೋಸ್ಯರೂ (ವೆಂಕಟಾದ್ರಿ ಅಯ್ಯನ್, ತಿರುಮಲ್ಯೆ - ಜೋಸ್ಯರ್ ಮೊದಲಾದವರು), ಜೀಯರುಗಳೂ ಹೀಗೆಯೇ ಗುಡಿಯ ಸಂಪತ್ತಿನ ಹೆಚ್ಚಳದಲ್ಲಿ ಪಾಲುಗೊಂಡಿದ್ದಾರೆ.

ಗುಡಿಗೆ ಸಂಬಂಧಪಡದ ಹಲವರು ಗುಡಿಗೆ ಕೊಡುಗ್ಯೆ ಕೊಡುಗೆಗಳನ್ನು ನೀಡಿರುವ ಶಾಸನಗಳಿವೆ. ಅರಸರ ಅಧಿಕಾರಿಗಳೂ ದಂಡನಾಯಕರೂ ಸೇರಿ ಗುಡಿಯ ಶ್ರೀ ಭಂಡಾರಕ್ಕೆ ಮೂವತ್ತುನಾಲ್ಕು ಗ್ರಾಮಗಳನ್ನು ಸೇರಿಸಿ, ಸುಮಾರು ನಲವತ್ತು ಸಾವಿರ ಪಣಗಳನ್ನು ಸಲ್ಲಿಸಿದರು. ಊರ ಹಿರಿಯರಾಗಿದ್ದ ರಾಯಸಂ ಹರಿಯಪ್ಪರ್, (೧೫೮೦ ಪಣಗಳು), ಉದಯಗಿರಿ-ದೇವರಾಯ-ಭಟ್ಟರ್ (೪೬೦೦ ಪಣಗಳು), ಶೆಟ್ಟಲೂರು - ಕುಪ್ಪಯ್ಯನ್ (೨೫೫೦ ಪಣಗಳು), ಎಲ್ಲಪ್ಪ-ಪಿಳ್ಳೈ (೧೫೮೦ ಪಣಗಳು), ಮೊದಲಾದವರು ತಂತಮ್ಮ ಕೈಂಕರ್ಯಗಳನ್ನು ಗುಡಿಗೆ ಸಲ್ಲಿಸಿದರು. ಇವೆಲ್ಲ ಅಚ್ಯುತರಾಯ ಮತ್ತು ಸದಾಶಿವರಾಯ ಇವರ ಕಾಲದಲ್ಲಿ ನಡೆದ ಧರ್ಮಗಳು. ಮುಂದೆ ವೆಂಕಟಪತಿರಾಯನ ಕಾಲದಲ್ಲೂ ಅರಮನೆಯ ಅಧಿಕಾರಿಗಳೂ (ಅವಸರಂ ಚೆನ್ನಪ್ಪರ್, ದೊಕ್ಕಸಂ-ಕೃಷ್ಣಯ್ಯನ್ ಇತ್ಯಾದಿ), ಸೇನಾನಿಗಳೂ (ತಿಲ್ಲಪ್ಪ- ನಾಯಕ್ಕರ್, ಹನುಮಯ್ಯರ್-ಅಣ್ಣಂಗಾರ್ ಮೊದಲಾದವರು), ವೈದಿಕ ಬ್ರಾಹ್ಮಣರೂ (ಕೋಮಂಡೂರು ಅಪ್ಪಯ್ಯರ್, ತಿರುವೆಂಕಟ-ಅಯ್ಯಂಗಾರ್, ಆಳ್ವಾರ್-ಕೋಯಿಲ್ ತಿರುವೆಂಕಟಯ್ಯನ್ ಇತ್ಯಾದಿ), ಊರ ಹಿರಿಯರೂ (ನಾರಾಯಣ-ಅಯ್ಯನ್, ಅಪ್ಪಾಲ-ಚೆನ್ನಪ್ಪನ್, ಪೆರಿಯ-ತಿಮ್ಮಪ್ಪ-ನಾಯಕ್ಕರ್, ನಾರಾಯಣ ದಾಸರಿ ನಾಯಕ್ಕರ್, ವೆಂಕಮರಸರೆಡ್ಡಿ, ಕೊಂಡಾಪಂಡಿತನ ಮಗ ತಮ್ಮಯ್ಯನ್ ಇತ್ಯಾದಿ), ವರ್ತಕರೂ (ಕೊಂಡು-ಶೆಟ್ಟಿ, ಶಿಲಂಬಿಡ್ಯೆಯರ್-ಶೆಟ್ಟಿ, ವೀರಮ-ಶೆಟ್ಟಿ ಮೊದಲಾದವರು), ಗುಡಿಗೆ ಸಂಬಂಧಪಟ್ಟವರೂ (ಅರ್ಚಕರು, ಆಚಾರ್ಯಪುರುಷರು, ಜೀಯರು, ತಿರುನಿಸ್ರ ಊರ ಊಡ್ಯೆಯಾನರು) ಗುಡಿಯ ದೊಕ್ಕಸವನ್ನು ತುಂಬಿಸಿದರು.

ಈ ಕಾಲದಲ್ಲಿ ದೇಶದ ನೆಮ್ಮದಿ ಕದಡಿದ್ದು, ಜನರಲ್ಲಿ ಕಾತರ ಒದಗಿದ್ದಿತಾಗಿ ಬರುಬರುತ್ತ ಇಂಥ ಕೊಡುಗೆಗಳು ಕಡಮೆಯಾದುವು. ಅರ





### ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
### ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷವಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.



ಸರೇ ಮಣ್ಣುಮುಕ್ಕುತ್ತಿರುವಾಗ, ಸಾಮಾನ್ಯಜನರೇನು ಮಾಡಬಲ್ಲರು? ಶಾಸನಗಳಲ್ಲಿ ಹೇಳುವಂಥದಾನ ಇಳಿಮುಖವಾಯಿತಾದರೂ, ಬೆಟ್ಟಕ್ಕೆ ಜನ ಬರುವುದಾಗಲೀ ಬಂದವರು ದೇವರ ಕೊಪ್ಪರದಲ್ಲಿ ತಮ್ಮ ಶಕ್ತಿಯಿದ್ದಷ್ಟು ಹಣವನ್ನು ಸುರಿಯುವುದಾಗಲೀ ನಿಲ್ಲಲಿಲ್ಲ. ಆದರೆ ಗುಡಿಯ ಆದಾಯದಲ್ಲಿ ಇಳಿಮುಖವಾದುದು ಗಮನಾರ್ಹವಾದುದೇ, ಶಾಸನಗಳನ್ನು ನೋಡಿದರೆ. ಕೃಷ್ಣದೇವರಾಯನ ಕಾಲದಲ್ಲಿ ಗುಡಿಗೆ ಸಂದ ನಿಧಿ ಸುಮಾರು ಎಂಬತ್ತು ಸಾವಿರ ರೇಖೆ-ಪೊನ್ನುಗಳು, ಅಚ್ಯುತರಾಯನ ಕಾಲದಲ್ಲಿ ಐವತ್ತು-ಸಾವಿರದಷ್ಟು; ಸದಾಶಿವರಾಯನ ಕಾಲದಲ್ಲಿ ಇಪ್ಪತ್ತು-ಸಾವಿರಗಳಷ್ಟೇ; ಸದಾಶಿವರಾಯನ ಕಾಲವಾದ ಮೇಲೆ ವಿಜಯನಗರದ ಅರಸರು ಆಳುವವರೆಗೂ ಗುಡಿಗೆ ಸಂದುದು ಐನೂರ ಇಪ್ಪತ್ತೈದು ರೇಖೆ- ಪೊನ್ನುಗಳು! ಗುಡಿಗೆಂದು ಹಿಂದಿನವರು ನೀಡಿದ್ದ ಹಲವು ಹಳ್ಳಿಗಳು ಆದಾಯವಿಲ್ಲದೆ ಹೋದುವು, ಹಲವು ಕಾರಣಾಂತರಗಳಿಂದ ಕೈಬಿಟ್ಟು ಹೋದುವು. ಹೀಗಾಗಿ ಮೊದಲು ನಡೆಯುತ್ತಿದ್ದ ಉತ್ಸವಗಳಲ್ಲಿ ಹಲವು ನಿಲ್ಲಬೇಕಾಯಿತು; ಹಿಂದಿನವರು ಏರ್ಪಡಿಸಿದ್ದ ಸಂಧಿಗಳೂ ಅವಸರಗಳೂ ಹಲವು ನಿಲ್ಲಬೇಕಾಯಿತು; ಹಿಂದಿನವರು ಏರ್ಪಡಿಸಿದ್ದ ಸಂಧಿಗಳೂ ಅವಸರಗಳೂ ಹಲವು ಮರೆಯಾದುವು, ತಳಿಗೆಗಳ ವೈವಿಧ್ಯವೂ ಸಂಖ್ಯೆಯೂ ಇಳಿದುವು.

## ಮೈಸೂರು ದೊರೆಗಳ ಕೊಡುಗೆ

ಇಮ್ಮಡಿ ಶ್ರೀರಂಗನು ವಿಜಯನಗರದ ಅರಸನಾಗಿದ್ದಾಗ ಮೈಸೂರು ಸೀಮೆಯ ಸಂಪರ್ಕವನ್ನು ವಿಶೇಷವಾಗಿ ಬೆಳೆಸಿಕೊಂಡಿದ್ದನು. ಅವನು ೧೫೭೫ರಲ್ಲಿ ನಮ್ಮ ಮೇಲುಕೋಟೆ ಗುಡಿಗೆ ಹಲವು ಕೈಂಕರ್ಯಗಳನ್ನು ಸಲ್ಲಿಸಿದ ಉಲ್ಲೇಖವಿದೆ. ಅವನ ಹಿರಿಮೆಯ ಸೊಲ್ಲು ಹರಡಿದ್ದು ಅವನು ಅಹೋಬಿಲ ಕ್ಷೇತ್ರವನ್ನು ಇಬ್ರಾಹಿಂ ಕುತ್‌ಬ್-ಶಾ ಮತ್ತು ಹಂಡೆ-ಅನಂತಪುರದ ಪಾಳೈಗಾರ ಮಲಕಪ್ಪ ಇವರ ಆಕ್ರಮಣದಿಂದ ಬಿಡಿಸಿದನೆಂಬ ಕಾರಣದಿಂದ. ಇವನ ನಂತರ ದೊರೆಯಾದ ವೆಂಕಟಪತಿರಾಯನ ಕಾಲದಲ್ಲಿ ಅವನ ಪರವಾಗಿ ಮೈಸೂರು ಸೀಮೆಯನ್ನು ಆಳುತ್ತಿದ್ದವನು ಅವನ ಸೋದರಳಿಯ ತಿರುಮಲನೆಂಬುವನು. ಸುಮಾರು ೧೫೮೫ ರಿಂದ ೧೬೧೦ ರ ವರೆಗೆ ಈತನು ಮಂಜರಾಬಾದಿನಿಂದ ಮೈಸೂರಿನ ವರೆಗೆ ತನ್ನ ಅಧಿಕಾರದ ಹರವನ್ನು ಹರಡಿಕೊಂಡಿದ್ದನೆಂದೂ, ಅವನ ಕಾಲದಲ್ಲೇ ಯದುವಂಶದ ರಾಜ-ಒಡೆಯನು ಪ್ರಬಲನಾದನೆಂದೂ ತಿಳಿದುಬರುತ್ತದೆ. ಬರುಬರುತ್ತ ರಾಜ ಒಡೆಯರಿಗೂ ತಿರುಮಲನಿಗೂ



ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅವನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.



ಸರೇ ಮಣ್ಣುಮುಕ್ಕುತ್ತಿರುವಾಗ ಸಾಮಾನ್ಯಜನರೇನು ಮಾಡಬಲ್ಲರು? ಶಾಸನಗಳಲ್ಲಿ ಹೇಳುವಂಥದಾನ ಇಳಿಮುಖವಾಯಿತಾದರೂ, ಬೆಟ್ಟಕ್ಕೆ ಜನ ಬರುವುದಾಗಲೀ ಬಂದವರು ದೇವರ ಕೊಪ್ಪರದಲ್ಲಿ ತಮ್ಮ ಶಕ್ತಿಯಿದ್ದಷ್ಟು ಹಣವನ್ನು ಸುರಿಯುವುದಾಗಲೀ ನಿಲ್ಲಲಿಲ್ಲ. ಆದರೆ ಗುಡಿಯ ಆದಾಯದಲ್ಲಿ ಇಳಿಮುಖವಾದುದು ಗಮನಾರ್ಹವಾದುದೇ, ಶಾಸನಗಳನ್ನು ನೋಡಿದರೆ. ಕೃಷ್ಣದೇವರಾಯನ ಕಾಲದಲ್ಲಿ ಗುಡಿಗೆ ಸಂದ ನಿಧಿ ಸುಮಾರು ಎಂಬತ್ತು ಸಾವಿರ ರೇಖೆ-ಪೊನ್ನುಗಳು, ಅಚ್ಯುತರಾಯನ ಕಾಲದಲ್ಲಿ ಐವತ್ತು-ಸಾವಿರದಷ್ಟು; ಸದಾಶಿವರಾಯನ ಕಾಲದಲ್ಲಿ ಇಪ್ಪತ್ತು-ಸಾವಿರಗಳಷ್ಟೇ; ಸದಾಶಿವರಾಯನ ಕಾಲವಾದ ಮೇಲೆ ವಿಜಯನಗರದ ಅರಸರು ಆಳುವವರೆಗೂ ಗುಡಿಗೆ ಸಂದುದು ಐನೂರ ಇಪ್ಪತ್ತೈದು ರೇಖೆ- ಪೊನ್ನುಗಳು! ಗುಡಿಗೆಂದು ಹಿಂದಿನವರು ನೀಡಿದ್ದ ಹಲವು ಹಳ್ಳಿಗಳು ಆದಾಯವಿಲ್ಲದೆ ಹೋದುವು, ಹಲವು ಕಾರಣಾಂತರಗಳಿಂದ ಕೈಬಿಟ್ಟು ಹೋದುವು. ಹೀಗಾಗಿ ಮೊದಲು ನಡೆಯುತ್ತಿದ್ದ ಉತ್ಸವಗಳಲ್ಲಿ ಹಲವುನಿಲ್ಲದೇಕಾಯಿತು; ಹಿಂದಿನವರು ಏರ್ಪಡಿಸಿದ್ದ ಸಂಧಿಗಳೂ ಅವಸರಗಳೂ ಹಲವು ನಿಲ್ಲಬೇಕಾಯಿತು; ಹಿಂದಿನವರು ಏರ್ಪಡಿಸಿದ್ದ ಸಂಧಿಗಳೂ ಅವಸರಗಳೂ ಹಲವು ಮರೆಯಾದುವು, ತಳಿಗೆಗಳ ವೈವಿಧ್ಯವೂ ಸಂಖ್ಯೆಯೂ ಇಳಿದುವು.

## ಮೈಸೂರು ದೊರೆಗಳ ಕೊಡುಗೆ

ಇಮ್ಮಡಿ ಶ್ರೀರಂಗನು ವಿಜಯನಗರದ ಅರಸನಾಗಿದ್ದಾಗ ಮೈಸೂರು ಸೀಮೆಯ ಸಂಪರ್ಕವನ್ನು ವಿಶೇಷವಾಗಿ ಬೆಳೆಸಿಕೊಂಡಿದ್ದನು. ಅವನು ೧೫೭೫ರಲ್ಲಿ ನಮ್ಮ ಮೇಲುಕೋಟೆ ಗುಡಿಗೆ ಹಲವು ಕೈಂಕರ್ಯಗಳನ್ನು ಸಲ್ಲಿಸಿದ ಉಲ್ಲೇಖವಿದೆ. ಅವನ ಹಿರಿಮೆಯ ಸೊಲ್ಲು ಹರಡಿದ್ದು ಅವನು ಅಹೋಬಿಲ ಕ್ಷೇತ್ರವನ್ನು ಇಬ್ರಾಹಿಂ ಕುತ್‌ಬ್-ಶಾ ಮತ್ತು ಹಂಡೆ-ಅನಂತಪುರದ ಪಾಳ್ಯೇಗಾರ ಮಲಕಪ್ಪ ಇವರ ಆಕ್ರಮಣದಿಂದ ಬಿಡಿಸಿದನೆಂಬ ಕಾರಣದಿಂದ. ಇವನ ನಂತರ ದೊರೆಯಾದ ವೆಂಕಟಪತಿರಾಯನ ಕಾಲದಲ್ಲಿ ಅವನ ಪರವಾಗಿ ಮೈಸೂರು ಸೀಮೆಯನ್ನು ಆಳುತ್ತಿದ್ದವನು ಅವನ ಸೋದರಳಿಯ ತಿರುಮಲನೆಂಬುವನು. ಸುಮಾರು ೧೫೮೫ ರಿಂದ ೧೬೧೦ ರವರೆಗೆ ಈತನು ಮಂಜರಾಬಾದಿನಿಂದ ಮೈಸೂರಿನವರೆಗೆ ತನ್ನ ಅಧಿಕಾರದ ಹರವನ್ನು ಹರಡಿಕೊಂಡಿದ್ದನೆಂದೂ, ಅವನ ಕಾಲದಲ್ಲೇ ಯದುವಂಶದ ರಾಜ-ಒಡೆಯನು ಪ್ರಬಲನಾದನೆಂದೂ ತಿಳಿದುಬರುತ್ತದೆ. ಬರುಬರುತ್ತ ರಾಜ ಒಡೆಯರಿಗೂ ತಿರುಮಲನಿಗೂ

ಅಸೂಯೆ-ವಿರಸಗಳು ತಲೆದೋರಿ, ಬೆಳೆದು ತಿರುಮಲನನ್ನು ತಲಕಾಡಿಗೆ ಅಟ್ಟುವುದರಲ್ಲಿ ಮುಗಿಯಿತು. ನೆಪಕ್ಕಾದರೂ ಅರಸನಾಗಿದ್ದ ವೆಂಕಟಪತಿರಾಯನು ರಾಜ-ಒಡೆಯನ ಕಡೆಗೇ ಇದ್ದುದರಿಂದ ರಾಜ-ಒಡೆಯನ ಬಲ ಇನ್ನಷ್ಟು ಹೆಚ್ಚಿತು; ತನ್ನನ್ನು 'ಕರ್ಣಾಟಕದ ದೊರೆ'ಯೆಂದೇ ಕರೆದುಕೊಂಡನು. ಸೊರಗಿ ಕರಗುತ್ತಿದ್ದ ವಿಜಯನಗರ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಿ ಮೈಸೂರು ಅರಸೊತ್ತಿಗೆ ಮೈದಳೆದುದು ಹೀಗೆ. ವಿಜಯನಗರದ ಮುಂದಿನ ಅರಸರಿಗೂ ಮೈಸೂರು ದೊರೆಗಳಿಗೂ ನೆಂಟು ಮುಂದರಿಯಿತು.

ಈ ನೆಂಟಿನ ಒಂದು ಮುಖ ಕರ್ಣಾಟಕದಲ್ಲಿ ಶ್ರೀ ವೈಷ್ಣವಧರ್ಮ ಬೆಳೆದು ಬಂದುದು. ವೆಂಕಟಪತಿರಾಯನ ಪ್ರಭಾವದಿಂದ ರಾಜ-ಒಡೆಯನೂ ಶ್ರೀ ವೈಷ್ಣವ ಶ್ರದ್ಧಾಳುವಾದನು. ವೆಂಕಟಪತಿರಾಯನಗುರುವಾಗಿದ್ದ ಶೋಟ್ಟೈ ಏಟ್ಟೂರು ಕುಮಾರ-ತಾತಾಚಾರ್ಯ ಅಯ್ಯನು ಈ ಕಡೆ ತುಂಬ ಪ್ರಭಾವವನ್ನು ಬೀರಿದನು. ಅತನಿಗೆ ಮೇಲುಕೋಟೆಯಲ್ಲಿ ತುಂಬ ಮರ್ಯಾದೆ ದೊರೆತ ಉಲ್ಲೇಖವಿದೆ. ಇದೇ ಹೆಸರಿನ ಇನ್ನೊಬ್ಬ ವ್ಯಕ್ತಿಯ ವಿಚಾರವನ್ನು ಹಿಂದೆಯೇ ಹೇಳಿದ್ದೇವೆ. ಇಬ್ಬರೂ ರಾಮಾನುಜರ ಸೋದರಮಾವ ತಿರುಮಲೆ-ನಂಬಿಯ ಮನೆತನಕ್ಕೆ ಸೇರಿದವರೇ, ತಿರುಪತಿ ಊರಿನವರೇ. ಆದರೆ ಮೊದಲು ಹೇಳಿದಾತ ತಿರುಮಲೆ ಗುಡಿಯ ಆಚಾರ್ಯಪುರುಷರಲ್ಲಿ ಒಬ್ಬ, ಈಗ ಹೇಳುವವನು ಅಲ್ಲ. ಇವನನ್ನು ಶಾಸನಗಳು 'ವೇದಮಾರ್ಗಪ್ರತಿಷ್ಠಾಪನಾಚಾರ್ಯ'ನೆಂದೂ, 'ಉಭಯವೇದಾಂತಾಚಾರ್ಯ'ನೆಂದೂ ಕರೆದಿವೆ. ಇವನನ್ನು 'ಲಕ್ಷ್ಮೀಕುಮಾರ-ತಾತಾಚಾರ್ಯ'ನೆಂದೂ 'ಕೋಟಿ ಕನ್ಯಾದಾನಂ-ತಾತಾಚಾರ್ಯ'ನೆಂದೂ ಕರೆಯುವುದುಂಟು. ಎರಡನೆಯ ಅಡ್ಡ ಹೆಸರಿನ ಸ್ವಾರಸ್ಯ ಆತನು ಶ್ರೀಮಂತನಾಗಿದ್ದು ನೂರಾರು ಬಡಹುಡುಗಿಯರಿಗೆ ಯೋಗ್ಯರಾದವರರನ್ನು ಹುಡುಕಿ ಮದುವೆ ಮಾಡಿಕೊಟ್ಟನೆಂದು, ಆತನು ತುಂಬ ವೈಭವದಿಂದ ಬಾಳುತ್ತಿದ್ದನೆಂದು ಆ ಕಾಲದಲ್ಲಿ ಇಲ್ಲಿದ್ದ ವಿದೇಶೀಯನೊಬ್ಬನು ಒಕ್ಕಣಿಸಿದ್ದಾನೆ. ಕಾಂಚೀಪುರದಲ್ಲೇ ಬಹುಮಟ್ಟಿಗೆ ಇರುತ್ತಿದ್ದು ಅಲ್ಲಿನ ವೈಷ್ಣವದೇವಾಲಯಗಳ ಮೇಲ್ವಿಚಾರಕನಾಗಿದ್ದನೆಂದು (ಶ್ರೀಕಾರ್ಯ ಧುರಂಧರ) ತಿಳಿದುಬರುತ್ತದೆ. ತನ್ನನ್ನು ಬಂಗಾರದಲ್ಲಿ ತೂಗಿಸಿಕೊಂಡು ಅದರಿಂದ ಕಾಂಚೀಪುರದ ವರದರಾಜಗುಡಿಯಲ್ಲಿ ಲಕ್ಷ್ಮೀ-ಸನ್ನಿಧಿಯ ಮೇಲೆ ಬಂಗಾರದ ವಿಮಾನವನ್ನು ('ಕಲ್ಯಾಣ ಕೋಟಿ' ವಿಮಾನ) ೧೬೧೪ ರಲ್ಲಿ ಮೂಡಿಸಿದನೆಂದೂ, ಕೃಷ್ಣದೇವರಾಯನು ವರದರಾಜಸನ್ನಿಧಿಯ ಮೇಲೆ ಮೂಡಿಸಿದ್ದ 'ಪುಣ್ಯಕೋಟಿ' ವಿಮಾನವನ್ನು ಮರಸ್ತಿ ಮಾಡಿಸಿದನೆಂದೂ ಉಲ್ಲೇಖವಿದೆ. ವೇಂಗಡದ ಗುಡಿಯಲ್ಲಿ ಬಂಗಾರದ ವಿಮಾನಕ್ಕೆ ಮತ್ತೆ ಈತನು ಕ್ರಿ.ಶ. ೧೬೩೦ರಲ್ಲಿ (೧೫೭೦ ಎಂಬ ಇನ್ನೊಂದು ಎಣಿಕೆ) ಮೆರುಗು ಹಾಕಿಸಿದನೆಂದೂ ಪ್ರತೀತಿಯಿದೆ. ಇದನ್ನು ತಿಳಿಸುವ ಶಾಸನ ಕಾಂಚೀಪುರದ ವರದರಾಜಸ್ವಾಮಿ ದೇವಾಲಯದಲ್ಲಿದೆ. ಈ ವಿಚಾರ ತಿರುಮಲೆಯ ಶಾಸನಗಳಲ್ಲಿ ಕಂಡುಬರುವುದಿಲ್ಲ.

ವಿಜಯನಗರದ ಕೃಷ್ಣದೇವರಾಯ, ಅಚ್ಯುತರಾಯರಾದ ಮೇಲೆ ವೇಂಗಡದ ದೇವರಿಗೆ ಔದಾರ್ಯದಿಂದ ನಡೆದುಕೊಂಡ ದೊರೆಗಳೆಂದರೆ ಮೈಸೂರಿನವರು. ರಾಜ ಒಡೆಯನು ದೇವರಿಗೆ ದಿನವೂ ಸಹಸ್ರನಾಮಾರ್ಚನೆಯನ್ನು ನಡೆಸುವ ವ್ಯವಸ್ಥೆ ಮಾಡಿದನು. ನಿತ್ಯಾರ್ಚನೆಗೆ ಬೇಕಾಗುವ ಪಾತ್ರೆಗಳನ್ನು ಬೆಳ್ಳಿ ಬಂಗಾರಗಳಲ್ಲಿ ಮಾಡಿಸಿಕೊಟ್ಟನು, ಉತ್ಸವಕ್ಕೆ ಬಂಗಾರದ ಕೊಡೆ, ರತ್ನಹಾರಗಳು ಮೊದಲಾದುವನ್ನು ನೀಡಿದನು. ಕಂಠೀರವ-ನರಸರಾಜ-ಒಡೆಯನು ಹಾಗೆಯೇ ಸೇವೆಗಳನ್ನು ಮುಂದರಿಸಿದನು. ದೊಡ್ಡ-ದೇವರಾಜ ಒಡೆಯನು ಉತ್ಸವರನ್ನು ಬಿಜಯಮಾಡಿಸಲೆಂದು ರತ್ನಖಚಿತವಾದ ಮಂಟಪವನ್ನೂ, ನೈವೇದ್ಯಭಾಜನವೆಂದು ಬಂಗಾರದ ದೊಡ್ಡ ತಟ್ಟೆಗಳೆರಡನ್ನೂ ಮಾಡಿಸಿಕೊಟ್ಟನು; ಬೆಟ್ಟದ ಮೇಲೆ ತುಳಸೀತೋಟವನ್ನು ಏರ್ಪಡಿಸಿದನು. ಅನಂತರ ರಾಜನಾದ ಚಿಕ್ಕದೇವರಾಜ-ಒಡೆಯನೂ ಬಂಗಾರದ ತಟ್ಟೆ ಮೊದಲಾದ ಉಪಕರಣಗಳನ್ನು ಗುಡಿಗೆ ಕೊಟ್ಟನು. ದೊಡ್ಡ-ಕೃಷ್ಣರಾಜ-ಒಡೆಯನು ಉತ್ಸವ ಸಂದರ್ಭಗಳಲ್ಲಿ ಅರ್ಚನೆಯ ವೆಚ್ಚಕ್ಕೆಂದು ಆರುನೂರು ಕಂಠೀರಾಯವರಹಗಳನ್ನು ಗುಡಿಯ ಭಂಡಾರಕ್ಕೆ ಸಲ್ಲಿಸಿದನು (೧೭೩೦ರ ಸುಮಾರಿಗೆ). ಚಿಕ್ಕ ಕೃಷ್ಣರಾಜ-ಒಡೆಯನು ರಾಜ-ಒಡೆಯನ ಕಾಲದಲ್ಲಿ ಕೊಟ್ಟಿದ್ದ ಬಂಗಾರದ ಉಪಕರಣಗಳನ್ನು ಸರಿಪಡಿಸಿ, ತನ್ನ ಕೈಂಕರ್ಯವೆಂದು ಹಲವಾರು ಬಂಗಾರ, ಬೆಳ್ಳಿ ಪಾತ್ರೆಗಳನ್ನೂ ರತ್ನಖಚಿತವಾದ ಒಡವೆಗಳನ್ನೂ ಉಡುಗೆಗಳನ್ನೂ ಗುಡಿಗೆ ಸಮರ್ಪಿಸಿದನು.

ಈ ಅರಸನ ಕಾಲದಲ್ಲೇ ದಂಡಿನ ಒಡೆಯನಾಗಿದ್ದ ಹೈದರಾಲಿಯು ಆಡಳಿತವನ್ನು ವಶಪಡಿಸಿಕೊಂಡುದು. ಅವನೂ, ಅವನ ನಂತರ ಟೀಪು-ಸುಲ್ತಾನನೂ ಮೈಸೂರು ಸೀಮೆಯನ್ನು ಆಳುತ್ತಿದ್ದು, ಅನಂತರ ಮುಮ್ಮಡಿ-ಕೃಷ್ಣರಾಜ ಒಡೆಯನು ಪಟ್ಟವೇರಿದ ಮೇಲೆ ಮತ್ತೆ ವೇಂಗಡದ ಗುಡಿಗೆ ಕೈಂಕರ್ಯಗಳು ಮುದರಿದುವು. ಗುಡಿಯಲ್ಲಿ ಅಖಂಡ ದೀಪದ ವ್ಯವಸ್ಥೆ, ನೈವೇದ್ಯಗಳು, ಗಜವಾಹನ ಮುಂತಾದ ಸೇವೆಗಳಿಗೆ ಒಂದುನೂರು ಐವತ್ತಾರು ಕಂಠೀರಾಯ ವರಹಗಳನ್ನು ಈ ಅರಸನು ನೀಡಿದನು. ಅಷ್ಟು ಮಾತ್ರವಲ್ಲದೆ, ದೆಟ್ಟದ ಮೇಲೆ ಮತ್ತು ಕೆಳಗೆ ತಿರುಪತಿಯಲ್ಲಿ ಯಾತ್ರಿಕರ ಸೌಕರ್ಯಕ್ಕೆಂದು ಚತ್ರಗಳನ್ನು ಕಟ್ಟಿಸಿ ಅವನ್ನು ನೋಡಿಕೊಳ್ಳಲು ೧೮೧೫ರಲ್ಲಿ ಒಬ್ಬ ಶಿರಸ್ತೇದಾರನನ್ನೂ ನೇಮಿಸಿದನು. ★



## ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ದೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.

* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ಇರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸ್ಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

# ಪ್ರಸನ್ನ ವೆಂಕಟದಾಸರು

---ಆದ್ಯರಾಮಾಚಾರ್ಯ.

ಮಾನವನ ಭಕ್ತಿಯ ಭಾವವು ವಿಶ್ವದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಭಾವನಾಜೀವಿಯಾದ ಮಾನವ ವಿಚಾರಶೀಲನೂ ಚಿಂತಕನೂ ಅಹುದು. ಆತನು ಬಾಳಿನುದ್ದಕ್ಕೂ ಅನುಭವಿಸಿದ ಭಾವಾನುಭಾವಗಳೊಂದಿಗೆ ವಿಶ್ವದಾಶ್ರಯದಲ್ಲಿಯೇ ಬೆಳೆಯುತ್ತ ಬಂದಿದ್ದಾನೆ. ನಿಸರ್ಗದೊಂದಿಗೆ ಅದೃಷ್ಟದ ಕೈಗೂಸಾಗಿ ಪಾಲನೆಗೊಂಡಿದ್ದಾನೆ. ತಾನು ಬೆಳೆದ ನಿಸರ್ಗದ ಒಂದೊಂದೇ ಚಮತ್ಕಾರಗಳನ್ನು ಕಂಡು ತನಗರಿವಿಲ್ಲದಂತಹ ಶಕ್ತಿಗೆ ಮಾರುಹೋಗಿ ಅವ್ಯಕ್ತವಾದ ಆ ಶಕ್ತಿಯೇ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದವನೆಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾನೆ. 'ಸನ್ನೊಂದಿಗೆ ಈ ನಿಸರ್ಗವನ್ನು ಸೃಷ್ಟಿಸಿದವನೊಬ್ಬನಿದ್ದಾನೆ. ಆತನೇ ಎಲ್ಲ ಜೀವವನ್ನು ರೂಪಿಸುವವನು. ಆತ ಸರ್ವಶಕ್ತನಾದ ಭಗವಂತ. ನಾನು ಆತನ ದಾಸ' ಎಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾನೆ. ಆತನ ಈ ಭಾವನೆ ಹಾಗೂ ಬದುಕು ವಿಶ್ವಕ್ಕೆ ಶಾಂತಿಯನ್ನು ಒದಗಿಸುವ ಸಂದೇಶಗಳಾಗಿ ಗುರುತಿಸಲ್ಪಡುತ್ತಿವೆ.

ಈಶ ದಾಸಭಾವದ ಪ್ರಾಕಾರವನ್ನು ಕಂಡುಕೊಂಡಾಗ ಮುಂದೆ ಕಾಲಾಂತರದಲ್ಲಿ ಹರಿದಾಸ ಪದರೂಪವನ್ನು ತಾಳಿತು. ಹರಿದಾಸವೆಂಬುದು ಜಾತಿವಾಚಕ ಶಬ್ದವಲ್ಲ. ಈ ವಿಚಾರದಲ್ಲಿ ನಾವು ಮಹಾವೀರಾಗ್ರಣಿಯಾದ, ವ್ಯಾಕರಣ ಪಂಡಿತನೆಂದೆನಿಸಿಕೊಳ್ಳುವ ಕನ್ನಡನಾಡಿನ ಕಿಷ್ಕಿಂದಾನಿವಾಸಿ ಎಂದೆನಿಸಿಕೊಂಡ ಆಂಜನೇಯನ ಹೆಸರನ್ನು ಸೂಚಿಸಬಹುದು. ಒಂದು ಸಂದರ್ಭದಲ್ಲಿ ಆ ಮಹಾನುಭಾವನು ಮದಾಂಧನಾದ ರಾವಣನಿಗೆ "ದಾಸೋಹಂ ಕೋಸಲೇಂದ್ರಸ್ಯ" ಎಂಬ ಮಾತಿನಿಂದ ತನ್ನ ಪರಿಚಯ.ಮಾಡಿಕೊಡುತ್ತಾನೆ. ಆದುದರಿಂದ ದಾಸಶಬ್ದದ ಮೂಲಪುರುಷ ಆಂಜನೇಯನೇ ಎಂದು ಹೇಳಬಹುದು.

ಕರ್ನಾಟಕದ ಹರಿದಾಸಪರಂಪರೆಗೆ ಎಂಟುನೂರುವರುಷಗಳ ಇತಿಹಾಸವಿದೆ. ಭಾಗೀರಥಿಯಂತಿರುವ ಈ ದಾಸ ಪರಂಪರೆಯು ಇಂದಿಗೂ ಜೀವನದಿಯಾಗಿ ಹರಿದು ಬರುತ್ತಿರುವುದನ್ನು ನಾವು ಕಾಣುತ್ತೇವೆ. ಹರಿದಾಸರು ತಮ್ಮ ಕಾರ್ಯಕ್ರಮಗಳನ್ನಾರಂಭಿಸುವಾಗ "ನಮಃ ಶ್ರೀಪಾದರಾಜಾಯ ಎಂದು ಪ್ರಾರಂಭಿಸಿ ವ್ಯಾಸರಾಯರನ್ನು ಪುರಂದರದಾಸರ ಹೆಸರಿನೊಂದಿಗೆ ವಿಜಯದಾಸರ ಹೆಸರನ್ನೂ ಸ್ಮರಿಸಿಕೊಳ್ಳುತ್ತಾರೆ. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ತಿರುಮಲಾಧೀಶನ ಅನುಗ್ರಹ ಪಡೆದ ಹರಿದಾಸರೆಂದೆನಿಸಿದ ಪ್ರಸನ್ನರಾಯರನ್ನು ಮಾತ್ರ ಹಿಂದಕ್ಕೆ ತಳ್ಳಿದ್ದಾರೆ. ಪ್ರಸನ್ನರು ವಿಜಯದಾಸರಿಗಿಂತ ಹಿರಿಯರು. ಸಾಹಿತ್ಯಸೇವೆಯಲ್ಲಿ ಹಾಗೂ ಪರಮಾತ್ಮನ ಅನುಗ್ರಹ ಪಡೆದವರಲ್ಲಿ ಅಗ್ರಮಾನ್ಯರು. ಹೀಗಿದ್ದರೂ ದಾಸಪಂಥೀಯರ ಗಮನವು ಪ್ರಸನ್ನರಲ್ಲಿ ಕೇಂದ್ರೀಕೃತವಾಗಿಲ್ಲ. ಇದಕ್ಕೆ ಮೂಲಕಾರಣವೆಂದರೆ ವಿಜಯದಾಸರಂತೆ ಪ್ರಸನ್ನರು ಶಿಷ್ಯವರ್ಗವನ್ನು ಬೆಳೆಸಿದವರಲ್ಲ. ಅವರು ತಿರುಮಲಾಧೀಶನ ಏಕಾಂತ ಭಕ್ತರಾಗಿ ಬಾಳಿರುವುದೇ ಈ ವಿಷಯಕ್ಕೆ ಕಾರಣವಾಗಿರಬಹುದು ಎಂದು ಭಾವಿಸಬಹುದು.

ಕರ್ನಾಟಕದ ಹರಿದಾಸರೆಲ್ಲ ನೂರಕ್ಕೆ ತೊಂಬತ್ತೈದರಷ್ಟು ಜನ ಪಂಢರಪುರದ ವಿಠ್ಠಲನ ಹೆಸರನ್ನೇ ಅಂಕಿತವಾಗಿಟ್ಟುಕೊಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ. ನರಹರಿತೀರ್ಥರು, ವ್ಯಾಸರಾಯರು, ವಾದಿರಾಜರು, ಹಾಗೂ ಪ್ರಸನ್ನ ವೆಂಕಟರು, ಕನಕದಾಸರು ಇವರೇ ಮೊದಲಾದ ಕೆಲವರು ತಮ್ಮ ಆರಾಧ್ಯದೈವವನ್ನು ಅಂಕಿತವಾಗಿಟ್ಟುಕೊಂಡು ಕೃತಿರಚನೆ ಮಾಡಿದ್ದಾರೆ. ಪ್ರಸನ್ನರ ಜೀವನವಂತೂ ತಿರುಮಲಾಧೀಶನೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಅವರು ಹೆಚ್ಚಾಗಿ ನಿಸರ್ಗದ ಆರಾಧಕರು. ನಿರಕ್ಷರ ಕುಕ್ಷಿಗಳು, ದನಗಾಹಿಯಾಗಿ ಬಾಳಿದವರು. ಸಾಧಕರಿಗೆ ಅವರ ಜೀವನವು ಚೇತೋಹಾರಿಯಾದ ಮಾರ್ಗದರ್ಶನವನ್ನೀಯುತ್ತದೆ.

ಪ್ರಸನ್ನರ ಪೂರ್ವಜರೆಲ್ಲ ಆದಿಲ್‌ಶಾಹಿ ರಾಜ್ಯದ ರಾಜಧಾನಿಯಾದ ಬೀಜಾಪುರದ ಸಮೀಪದಲ್ಲಿರುವ ಕಾಖಂಡಕಿ ಎಂಬ ಗ್ರಾಮ ನಿವಾಸಿಗಳು. ಇಬ್ರಾಹೀಮ ಆದಿಲ್‌ಶಹನಂತೂ ವೆಂಕಟೇಶನ ಪರಮ ಭಕ್ತನಾಗಿದ್ದ. ಒಳ್ಳೆ ಸಂಸ್ಕೃತ ವಿದ್ವಾಂಸನಾಗಿದ್ದ. ಸಂಗೀತ ಚಿತ್ರಕಲೆಗಳಲ್ಲಿ ಅಪ್ರತಿಭ ಪಂಡಿತನೆಂದೆನಿಸಿಕೊಳ್ಳುತ್ತಿದ್ದ. ಈತನ ಕಾಲದಲ್ಲಿ ರಾಜಧಾನಿಯ ಸಮೀಪದಲ್ಲಿಯೇ ವೆಂಕಟಾಪುರವೆಂಬ ಅಗ್ರಹಾರವೂ ನಿರ್ಮಾಣಗೊಂಡಿತ್ತು.

ಒಂದು ಕಾಲದಲ್ಲಿ ಕರ್ನಾಟಕದ ಪ್ರತಿಯೊಂದು ಭಾಗದಿಂದಲೂ ದೇವನ ಪಲ್ಲಕ್ಕಿಯೊಂದಿಗೆ ಯಾತ್ರಿಕರು ತಿರುಮಲೆಗೆ ಬಂದು ಹೋಗುವ ಸಂಪ್ರದಾಯವಿತ್ತು. ಆದಿಲ್‌ಶಾಹಿ ರಾಜ್ಯದ ಮಾಂಡಲೀಕರೆನಿಸಿದ ವಾಗನಗೇರಿಯ ಬೇಡರ ನಾಯಕರು (ಸುರಪುರದವರು) ತಿರುಮಲೆಯ ಬೆಟ್ಟದ ಮೇಲೆ ತಮ್ಮ ನಾಡಿನಿಂದ ಯಾತ್ರೆಗೆಂದು ಹೋಗುವವರಿಗಾಗಿ ಅನ್ನಛತ್ರವನ್ನು ಕಟ್ಟಿಸಿದ್ದರು. ಈ ಛತ್ರವೇ ಮೊಟ್ಟ ಮೊದಲನೆಯ ಕರ್ನಾಟಕದ ಛತ್ರವೆನಿಸಿಕೊಂಡಿತು. ಪ್ರತಿದಿನದ ಹೂವಿಗಾಗಿ ಹೂತೋಟವನ್ನು ರಚಿಸಿದ್ದರು. ಏಕಾಂತಸೇವೆಗಾಗಿ ಪ್ರತಿದಿನ ಹಾಲು ಪೂರೈಸುವಂತೆಯೂ, ದೇವನಿಗೆ ಪಲ್ಲಂಗಕ್ಕಾಗಿ ನವಾರವನ್ನೂ ಸಹ ಈ ನಾಯಕರಿಂದಲೇ ಕೊಡಲ್ಪಡುತ್ತಿತ್ತು. ಆದಿಲ್‌ಶಾಹಿ ರಾಜ್ಯದಿಂದ ಎರಡು ಹಳ್ಳಿಗಳೂ ಸಹ ದೇವನ ಸೇವೆಗಾಗಿ ಬಿಡಲ್ಪಟ್ಟಿದ್ದವು.

ಔರಂಗಜೇಬನು ವಿಜಾಪುರದ ಮೇಲೆ ದಾಳಿ ಮಾಡಿದಾಗ ಪ್ರಸನ್ನರ ಪೂರ್ವಜರು ವಾಸವಾಗಿದ್ದ ಕಾಖಂಡಕಿ ಗ್ರಾಮವು ನೆಲಸಮವಾಗಿ ಹೋಯಿತು. ಒಂದೇ ದಿನ ನಾನೂರು ಜನ ಹಿಂದೂ ಮಹಿಳೆಯರು ಬಾವಿಗೆ ಹಾರಿ ಪ್ರಾಣ ಕಳೆದುಕೊಂಡರು. ಈ ಗೊಂದಲದಿಂದ ಹೇಗೋ ಪಾರಾಗಿ ಬಂದ ಕುಟುಂಬವು ಘಟಪ್ರಭಾ ನದಿಯ ದಂಡೆಯ ಮೇಲಿರುವ ಬಾಗಲಕೋಟೆಗೆ ಬಂದು ಸೇರಿತು. ತಾಯಿ ತಂದೆ ಇಬ್ಬರು ಗಂಡು ಸಂತಾನದಿಂದ ಕೂಡಿದ ಈ ಕುಟುಂಬಕ್ಕೆ ಪ್ಲೇಗಿನ ಹಾವಳಿಯಲ್ಲಿ ಹಿರಿಯರಾದ ತಂದೆ ತಾಯಿಗಳು ಆಹುತಿಯಾದರು. ಕೊನೆಯ ಮಗನಾದ ವೆಂಕಪ್ಪಯ್ಯ ಅತೀ ಚಿಕ್ಕಬಾಲಕ. ಅತ್ತಿಗೆಯ ಅವಹೇಳನದ ಮಾತನ್ನು ತಾಳಲಾರದೆ ದನ ಕಾಯುವ ವೃತ್ತಿಯನ್ನಾರಂಭಿಸಿದ. ಗೋಪಾಲಕನಾದ. ಆಗಾಗ ಆತನಿಗೆ ಎಲ್ಲಿಂದಲೋ ಕೊಳಲಿನ ನಾದವು ಕೇಳಿಬರತೊಡಗಿತು. ನಿಸರ್ಗದಲ್ಲಿ ಮೈಮರೆತು ಆ ನಾದ ಮಾಧುರ್ಯದಲ್ಲಿ ಒಂದಾಗಿ ಹೋಗುತ್ತಿದ್ದ. ಒಂದು ಸಂದರ್ಭದಲ್ಲಿ ಬ್ರಹ್ಮೋತ್ಸವಕ್ಕೆಂದು ತಿರುಮಲೆಗೆ ವಿಜಾಪುರದಿಂದ ಹೊರಟ ಪಲ್ಲಕ್ಕಿಯು ಬಾಗಲಕೋಟೆಗೆ ಬಂದಿಳಿದಾಗ ವೆಂಕಪ್ಪಯ್ಯ ಆ ಪ್ರವಾಸಿಗರೊಂದಿಗೆ ದಿನಕ್ಕೊಂದು ಊರಿನಂತೆ ಸಂಚಾರ ಮಾಡುತ್ತ ತಿರುಮಲೆಗೆ ಬಂದು ಸೇರಿದ. ದೇವಸ್ಥಾನದ ಮುಂಭಾಗದಲ್ಲಿದ್ದ ಸುರಪುರದ ಛತ್ರದಲ್ಲಿಯೇ ಆತನಿಗೆ ಆಶ್ರಯವು ಲಭಿಸಿತು. ಛತ್ರದ ಪಾರುಪತ್ಯದಾರರಿಗೆ ಕನ್ನಡನಾಡಿನ ಹುಡುಗ ದೊರೆತುದು ಬೆಚ್ಚಿನ ಅನುಕೂಲವೆನಿಸಿತು. ಅಂದಿನಿಂದ ವೆಂಕಪ್ಪಯ್ಯ ಹನ್ನೆರಡು ವರುಷಗಳ ಕಾಲ ಶ್ರೀನಿವಾಸನ ಸೇವೆಯಲ್ಲಿ ನಿರತನಾದ. ಬಂದ ಯಾತ್ರಿಕರಿಗೆಲ್ಲ ಅನುಕೂಲಗಳನ್ನೊದಗಿಸುತ್ತ ಸಜ್ಜನರ ಸಹವಾಸದಲ್ಲಿ ದಿನಗಳೆಯತೊಡಗಿದ.

తిరుమలె - తిరుపతి దేవస్థానగళు

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಯಾತ್ರಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

ತಿ. ತಿ. ದೇವಸ್ಥಾನಗಳು,

--ತಿರುಪತಿ.

ಒಂದು ಸಲ ಬ್ರಹ್ಮೋತ್ಸವ ಕಾಲದಲ್ಲಿ ಕನಕದಾಸರ ಭಕ್ತರು ಒಟ್ಟುಗೂಡಿಕೊಂಡು ದೇವನ ರಥವ ಮುಂದೆ ಕಂಬಳಿಗಳನ್ನು ಹೊದ್ದುಕೊಂಡು, ಕಾಲಿಗೆ ಗೆಜ್ಜೆಕಟ್ಟಿಕೊಂಡು, ಡೊಳ್ಳು ಜಾಗಟೆ, ತಾಳವಾದ್ಯಗಳೊಂದಿಗೆ "ದೇವೀ ನಮ್ಮನೇ ದ್ಯಾವರು ಬಂದಾರೆ ನೋಡೀರೆ ನೋಡಬನ್ನೀರೇ" ಎಂಬ ಕನಕದಾಸರ ಪದ್ಯವನ್ನು ಭಾವ ಪರವಶರಾಗಿ ಏಕೋಭಾವದಿಂದ ಮೈಮುಂಬಿ ತಾಳಲಯಬದ್ಧವಾಗಿ ನರ್ತಿಸುತ್ತ, ಭಜನೆ ಮಾಡುತ್ತ ಕುಣಿಯುತ್ತಿರುವುದನ್ನು ಕಂಡಾಗ ಆ ದೃಶ್ಯ ವೆಂಕಪ್ಪಯ್ಯನ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮವನ್ನು ಮಾಡಿತು.

"ಹೇ, ದೇವ, ನಾನು ನಿರಕ್ಷರ ಕುಕ್ಷಿ. ಆದರೂ ನನ್ನಿಂದ ಇಂದಿನವರೆಗೆ ಅವ್ಯಾಹತವಾಗಿ ನಿನ್ನಸೇವೆ ಸಾಂಗವಾಗಿ ಸಾಗುತ್ತಬಂದಿದೆ. ನನ್ನ ಮೇಲೆ ಅನುಗ್ರಹ ಮಾಡಬಾರದೇ. ನಾನು ಈ ಜನರಂತೆ ನಿನ್ನ ಮಹಿಮೆಗಳನ್ನು ಕೊಂಡಾಡುತ್ತಾ ನರ್ತಿಸುವ ಭಾಗ್ಯವನ್ನು ನನಗೆ ದಯಪಾಲಿಸಬಾರದೇ. ಇಂದೇ ಸಂಕಲ್ಪಮಾಡುತ್ತೇನೆ. ನಿನ್ನ ಅನುಗ್ರಹವಾಗುವವರೆಗೆ ನಾನೆಂದೂ ಅನ್ನವನ್ನು ಸ್ವೀಕಾರ ಮಾಡುವುದಿಲ್ಲ. ಯಾರಿಗೂ ಬೇಡವಾದ ಈ ಜೀವ ಇದ್ದರೇನು ಇರದಿದ್ದರೇನು. ಅದನ್ನು ನಿನ್ನ ಪಾದಾರವಿಂದದಲ್ಲಿಯೇ ಸಮರ್ಪಿಸುತ್ತೇನೆ." ಎಂದು ಉಪವಾಸವನ್ನಾರಂಭಿಸಿದ. ಯಾರು ಏನು ಹೇಳಿದರೂ ತನ್ನ ಉಪವಾಸವನ್ನು ಬಿಡಲಿಲ್ಲ. ದಿನದಿಂದ ದಿನಕ್ಕೆ ಆತನ ದೇಹ ಕ್ಷೀಣಿಸತೊಡಗಿತು. ಆತನ ಪರಿಸ್ಥಿತಿಯನ್ನು ಕಂಡು ಮನಕರಗಿದ ಶ್ರೀದೇವಿಯು "ಶ್ರೀನಾಥ, ಈ ಮಗುವಿನ ಕಡೆಗೆ ಗಮನ ಹರಿಸಬಾರದೇ. ತಾವು ಭಕ್ತ ಪರಾಧೀನರೆಂದೆನಿಸಿಕೊಳ್ಳುವುದಿಲ್ಲವೆ. ಆ ಮಗುವನ್ನುಳಿಸಿರಿ. ನಿಮ್ಮ ದಾಸಾನುದಾಸನನ್ನಾಗಿ ಮಾಡಿರಿ" ಎಂದು ಕೇಳಿಕೊಂಡಳು. ಅದೇ ಸಮಯಕ್ಕೆ ಸರಿಯಾಗಿ ವೆಂಕಪ್ಪಯ್ಯನಿಗೆ ಕೊಳಲಿನ ನಾದದೊಂದಿಗೆ ದಿವ್ಯ ಪ್ರಕಾಶದ ದರ್ಶನವಾದಂತೆನಿಸತೊಡಗಿತು. "ಮಗೂ ನಾಲಿಗೆಯನ್ನು ಮುಂದೆಮಾಡು ಎಂದು ಹೇಳಿದಾಗ ಆತನು ತನ್ನ ನಾಲಿಗೆಯನ್ನು "ಮುಂದೆ ಚಾಚಿದ. ಆ ನಾಲಿಗೆಯ ಮೇಲೆ ಸ್ವತಃ ತಿರುಮಲಾಧೀಶನೇ "ಪ್ರಸನ್ನವೆಂಕಟ" ಎಂಬ ಹೆಸರನ್ನು ಬರೆದ. ಮಗೂ ಈ ಘಳಿಗೆಯಿಂದ ನಿನ್ನ ನಾಲಿಗೆಯಿಂದ ಹೊರಹೊಮ್ಮುವ ಕೃತಿಗಳೆಲ್ಲ "ಪ್ರಸನ್ನ ವೆಂಕಟ" ಹೆಸರಿನಿಂದಲೇ ಹೊರಹೊಮ್ಮುವಂತಾಗಲಿ" ಎಂದು ಅನುಗ್ರಹಮಾಡಿದ. ಮರುಕ್ಷಣ ಎಚ್ಚತ್ತು ಮೇಲೆದ್ದು ಕುಳಿತುಕೊಂಡ ವೆಂಕಪ್ಪಯ್ಯನ ಮುಖದಿಂದ "ತಪ್ಪು ನೋಡದೆ ಬಂದೆಯಾ ಎನ್ನ ತಂದೆಯಾ" ಎಂಬ ಪದ್ಯವು ಪ್ರಸನ್ನವೆಂಕಟ ಎಂಬ ಹೆಸರಿನಿಂದ ಹರಿದು ಬರುವಂತಾಯಿತು.

ತಿರುಮಲಾಧೀಶನ ಅನುಗ್ರಹವನ್ನು ಪಡೆದು ಮರಳಿ ಬಾಗಲಕೋಟೆಗೆ ಬಂದ ಪ್ರಸನ್ನರು ಕೆಲವು ದಿನ ಕೃಷ್ಣಾತೀರದ ಗಲಗಲಿ ಎಂಬ ಅಗ್ರಹಾರದ ವಿದ್ವಾಂಸರಲ್ಲಿ ವೇದಾಂತಾಭ್ಯಾಸವನ್ನು ಮುಗಿಸಿದರು. ಶ್ರೀಮದ್ಭಾಗವತ ಗ್ರಂಥದ ಮೇಲೆ ಅವರು ವಿಶೇಷ ಆಸಕ್ತಿಯನ್ನು ತಾಳಿದರು. ಶ್ರೀಕೃಷ್ಣನ ಬಾಲಲೀಲೆಗಳನ್ನು ನಾನಾರೀತಿಯಲ್ಲಿ ಹಾಡಿ ಹೊಗಳಿದಾಗ "ರಂಗ ಕೊಳಲನೂದಿದಾಗ ರಂಗಯ್ಯ ಕೊಳಲನೂದಲು ಮಂಗಳವಾಯಿತೀಧರೆ" ಎಂಬ ಪದ್ಯವಂತೂ ಶ್ರೀಕೃಷ್ಣನ ರಾಸಲೀಲೆಯ ಸಮಗ್ರ ಚಿತ್ರವನ್ನೇ ಕಣ್ಮುಂದೆ ನಿಲ್ಲುವಂತೆ ಮಾಡುವದು.

ತಿರುಮಲಾಧೀಶನಾದ ಶ್ರೀನಿವಾಸನು ತನ್ನ ಭಕ್ತನನ್ನು ಸ್ವಸ್ಥಾನಕ್ಕೆ ಕಳಿಸಿ ಕೊಡುವಾಗ ಪ್ರಸನ್ನದಾಸರಿಗೊಪ್ಪಿಸಿದ ಗೋಪಾಳಬುಟ್ಟಿ, ಶ್ರೀದೇವಿ, ಭೂದೇವಿ ಸಮೇತ ಶ್ರೀನಿವಾಸನ ವಿಗ್ರಹ ಹಾಗೂ ಅವರು ಉಪಯೋಗಿಸುತ್ತಲಿದ್ದ ತಂಬೂರಿ ಇವೇ ಮೊದಲಾದ ಹರಿದಾಸರ ಸಂಪತ್ತಿನ ನಿಧಿಯನ್ನು ಇಂದಿಗೂ ಬಾಗಲಕೋಟೆಯಲ್ಲಿರುವ ಅವರ ವಂಶಜರ ಮನೆಯಲ್ಲಿ ಕಾಣಬಹುದು.

ಧನಾಜಿ ಜಾಧವನ ಮಗನಾದ ಚಂದ್ರಸೇನ ಜಾಧವ ಎಂಬ ಸರದಾರನು ಗ್ರಹಣ ಕಾಲದಲ್ಲಿ ಬಾದಾಮಿಗೆ ಬಂದಾಗ ದಾಸರನ್ನು ಕರೆಸಿಕೊಂಡು ಅವರಿಗಾಗಿ ಎರಡು ಮನೆಗಳನ್ನು ದಾನಮಾಡಿದನಲ್ಲದೆ ಕೆಲವು ಭೂಮಿಗಳನ್ನೂ ಸಹ ಇನಾಮು ಹಾಕಿ ಕೊಟ್ಟನು. ಬಾಗಲಕೋಟೆಯಲ್ಲಿರುವುದು ಬೇಸರವೆನಿಸಿದಾಗ ದಾಸರಾಯರು ಬಾದಾಮಿಗೆ ಬಂದು ವಾಸಮಾಡತೊಡಗಿದರು. ಅವರಿಗೆ ಗೃಹದಾನವನ್ನಿತ್ತ ಚಂದ್ರಸೇನ ಜಾಧವನೂ ಸಹ ಬಾದಾಮಿಯಲ್ಲಿಯೇ ಮರಣ ಹೊಂದಿದನು. ಮುಂದೆ ಎರಡು ತಿಂಗಳಲ್ಲಿ ಪ್ರಸನ್ನವೆಂಕಟದಾಸರೂ ಸಹ ಬಾದಾಮಿಯಲ್ಲಿಯೇ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.

ಚಾಲುಕ್ಯರ ರಾಜಧಾನಿ ಎಂದು ಖ್ಯಾತವಾದ ಗುಹಾಂತರ್ದೇವಾಲಯಗಳಿಂದ ಪ್ರವಾಸಿಗರನ್ನಾಕರ್ಷಿಸುವ ಬನಶಂಕರಿ ದೇವಿಯ ದಿವ್ಯಕ್ಷೇತ್ರವೆಂದೆನಿಸಿಕೊಳ್ಳುವ ಬಾದಾಮಿಯಲ್ಲಿರುವ ಹೊಂಡದ ಮೇಲಿರುವ ಪ್ರಸನ್ನವೆಂಕಟ ದಾಸರ ಕಟ್ಟೆಯು ಇಂದಿಗೂ ತಿರುಮಲಾಧೀಶನ ಸೇವಕನೊಬ್ಬನು ಚಿರನಿದ್ರೆಯಲ್ಲಿರುವ ಸಂಕೇತವನ್ನು ಸೂಚಿಸುವದುಂಟು.

★★★★★★★★★

# ದೇಶಿಕರು ಮತ್ತು ದಯಾನಿಧಿ

---ಸಿ. ಗೋವಿಂದಾಚಾರ್.

ಭಗವಂತನ ತೇಜೋಮಯವಾದ ಮುಖ ಮಂಡಲವು 'ನತ್ತಾವಜ್ರಿನ ಸಹಸ್ರಸೂರ್ಯ ಅನು' ಎಂದು ಶ್ರುತಿಯಲ್ಲಿ (ಖು viii ೮೧ - ೫೧), 'ದಿವಿಸೂರ್ಯ ಸಹಸ್ರಸ್ಯ' ಎಂದು ಗೀತೆ ಯಲ್ಲಿ, 'ಪುಂಸಾಂಮೋಹನರೂಪಾಯ' ಎಂದು ಮಹರ್ಷಿಗಳಿಂದ ಕೊಂಡಾಡಲ್ಪಟ್ಟಿದೆ. ಯತಿ ರಾಜರು ಶ್ರೀರಂಗನಾಥನನ್ನು ನೋಡಿದೊಡ ನೆಯೇ 'ಅಪರಿಮಿತ ದಿವ್ಯಭೂಷಣ' ಎಂದು ಮನಸ್ಸಿನಲ್ಲೇ ಅಂದುಕೊಂಡರು. ಅವರಿಗರಿವಾ ಗದಂತೆ ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿ ತೇಜಃ ಸೌಶೀಲ್ಯ........ ಎಂದು ೧೮ ಭೂಮಗುಣಗಳು ಅವರ ಸಿರಿಬಾಯಿಯಿಂದ ಧಾರಾಳವಾಗಿ ಪ್ರವ ಹಿಸಿತು. ವೇದಾಂತದೇಶಿಕರು ತಿರುಪತಿಯನ್ನು ಸೇವಿಸಲು ಬಂದಾಗ ಮಂದಹಾಸ ನಗೆಯಿಂದ ಕೂಡಿದ ಆ ಅದ್ಭುತ ಮುಖಮಂಡಲವನ್ನು ನೋಡಿದಾಗ 'ದಯಾನಿಧಿಯೇ' ಎಂದು ಮನ ಸಿನಲ್ಲೇ ಸ್ಮರಿಸುತ್ತಾ ನಿಂತರು. ಆ ಮುಖಮಂ ಡಲದಲ್ಲಿ ಅವರು ದಯಾಗುಣವನ್ನು ಕಂಡು ನಾನಾ ರೀತಿಯ ಸದ್ಭಾವನೆಗಳನ್ನು ತಂದು ಕೊಂಡು ಶ್ರೀನಿವಾಸನ ದಯೆ ಎದುರಿಗೆ ಬಂದು ನಿಂತಿದೆಯೋ ಎಂದು ಭಾವಿಸಿಕೊಂಡು ಮನ ಸಿನ ಆ ವೇಗದಲ್ಲಿ ಸ್ತೋತ್ರ ರಚನೆ ಮಾಡಲು ಸಂಕಲ್ಪಿಸಿದರು. ಹೀಗೆ ಮಾಡಲು ವೆಂಕಟನ ಪ್ರೇರಣೆಯೇ ಕಾರಣವೆಂದೂ ತಾವು ನಿಮಿತ್ತ ಮಾತ್ರವೆಂದು ಫಲಶ್ರುತಿಯಲ್ಲಿ ಹೇಳಿರುತ್ತಾರೆ. ಶ್ರೀನಿವಾಸನ ಸನ್ನಿಧಿಯಲ್ಲಿ ಯಾರು ಯಾವ ಪ್ರಾರ್ಥನೆ/ಸ್ತುತಿ ಮಾಡಿದರೂ ಅವೆಲ್ಲಾ ನೆರ ವೇರಿ ಯಶಸ್ವಿಯಾಗುವುದು ಎಂಬ ಐತಿಹ್ಯ ಅನಾ ದಿಕಾಲದಿಂದಲೂ ಬಂದಿದೆ. ಅವನ ದಯೆ ಯಿಂದ ಪ್ರೇರಿತರಾಗಿ ತಮ್ಮ ಮನಸ್ಸಿನಲ್ಲಿ ಆವಿ ರ್ಭವಿಸಿದ ಎಲ್ಲಾ ಭಾವನೆಗಳನ್ನು 'ದಯಾಶ ತಕ' ಎಂಬ ೧೦೮ ಪದ್ಯಗಳಲ್ಲಿ ಹೊರಗೆಡ ವಿದ್ದಾರೆ. ದೇವರಿಗಿಂತ ದೇವರ ದಯೆಯೇ ಹಿರಿಮೆ ಉಳ್ಳದ್ದು ಎಂಬ ಘನ ಉದ್ದೇಶದೊಂ ದಿಗೆ ಈ ಭಾವಗೀತೆಯನ್ನು ರಚಿಸಿ ಶ್ರೀನಿವಾಸನ ದಯಾಗುಣವನ್ನು ನಾನಾರೀತಿಯಾಗಿ ವರ್ಣಿ ಸಿರುತ್ತಾರೆ. ಶ್ರೀನಿವಾಸನನ್ನು ಹೆಚ್ಚಾಗಿ ವೃಷಗಿ ರೀಶ, ವೃಷಶೈಲನಾಥ, ವೃಷಾಚಲಪತೆ, ವೃಷ ಪೃಥ್ವೀಧರಪತಿ ಎಂದೂ, ಕೆಲವೆಡೆ ಅಂಜನಾ ದ್ರೀಶ್ವರ ಎಂದು ಸಂಬೋಧಿಸಿರುತ್ತಾರೆ. ಅವ ನಲ್ಲಿರುವ ದಯೆಯನ್ನು ಕುರಿತು ಪದ್ಮಸಹಾ ಯಕರುಣೆ, ಶ್ರೀಧರ ಕರುಣೆ ವೃಷಗಿರೀಶದಯೆ ಎಂದು ಸ್ತುತಿಸಿ ದಯಾದೇವಿ - ಶ್ರೀನಿವಾ ಸರು ದಿವ್ಯದಂಪತಿಗಳೆಂದು ಭಾವಿಸಿ ಇವರಲ್ಲಿ ರುವ ಮೈತ್ರಿಯನ್ನು 'ತಾರಾಮೈತ್ರಿ (ಎಂದೆಂ ದಿಗೂ ಅಗಲಲಾರದ ಮೈತ್ರಿ) ಎಂದು ಹೇಳಿ ರುತ್ತಾರೆ. (ದ.ಶ. ೨೦) ಅಂದರೆ ಶ್ರೀನಿವಾ ಸನ ದಯಾಗುಣವನ್ನು ಅವನ ದಿವ್ಯಮಹಿಷಿಯ ನ್ನಾಗಿ ಭಾವಿಸಿ ದೀರ್ಘವಾಗಿ ಸ್ತುತಿಸಿರುವುದು ಈ ಕೃತಿಯ ವಿಶೇಷ. ಅರ್ಥ ಸಂಪತ್ತಿನಿಂದ ಕೂಡಿದ ಈ ಕೃತಿ ೧೦ ದಶಕಗಳಲ್ಲಿದೆ. ಕೊನೆಯ ೮ ಪದ್ಯ ಗಳಲ್ಲಿ ಫಲಶ್ರುತಿ ಇದೆ.

ಸೂರ್ಯ ಪ್ರಭ ವಾಹನ



ದಯೆಯ ಸ್ವರೂಪ : ಶ್ರೀನಿವಾಸನ ದಯೆ ಯನ್ನು ದೇಶಿಕರು ದಯಾದೇವಿ ಎಂದು ರೂಪ ಣಮಾಡಿ ಮಿಕ್ಕ ಭಾರ್ಯೆಯರಂತೆ, ಇವಳೂ ಕೂಡ ಅವನೊಡನೆ ನಿತ್ಯಯೋಗವನ್ನು ಹೊಂದಿರುವಳು, ಇವಳಿಲ್ಲದೆ ಭಗವತ್ಸ್ವರೂಪವಿ

ರುವುದಿಲ್ಲ ಎಂದು ಹೇಳಿದ್ದಾರೆ. ಇತರ ಗುಣಗಳಿಗೆ ತಾಯಿ ಬೇರಿನಂತೆ ಇದು ಎಲ್ಲಕ್ಕೂ ಮೂಲವಾಗಿದೆ. ಷಡ್ಗುಣಗಳು ಕಿಂಕರರಾಗಿ ಅನುಚರರಾಗಿ ಹಿಂಬಾಲಿಸಿ ದಯೆಯ ಪ್ರಭಾವಕ್ಕೆ ಒಳಗಾಗುವುವು. ಬೇರೆ ಗುಣಗಳು ರಕ್ಷಣೆ ಹಾಗೂ ಶಿಕ್ಷೆಗೂ ಒದಗುತ್ತವೆ. ಆದರೆ ದಯಾಗುಣ ಎಂದಿಗೂ ಶಿಕ್ಷೆಯನ್ನೊದಗಿಸುವುದಿಲ್ಲ. ತಾಯಿ ಮಗುವಿನಲ್ಲಿ ಹೇಗೋ ಹಾಗೆಯೇ ನಮ್ಮಲ್ಲಿ ವಾತ್ಸಲ್ಯ ತೋರುವ ಮಾತೆಯಾಗಿದ್ದಾಳೆ. ಶ್ರೀನಿವಾಸನದಯೆ ಎಂದರೆ ಅವನಲ್ಲಿರುವ ಮಾತೃಭಾವನೆ. ಇದರಲ್ಲೇ ದೇಶಿಕರು ಗಾಢವಾದ ಆಸಕ್ತಿ ವಹಿಸಿರುತ್ತಾರೆ. ದಯೆಯೆಂಬ ಭಗವಂತನ ಕಲ್ಯಾಣ ಗುಣವೇ ಪ್ರಧಾನವಾದುದು, ಇದೇ ತಮಗೆ ಸರ್ವಸ್ವವೂ ಆಗಿದೆಯೆಂದು ಹೇಳಿ, ಕಬ್ಬಿನ ರಸರೂಪದಲ್ಲಿ ಪ್ರವಹಿಸಿ ಶ್ರೀನಿವಾಸನ ದಯೆಯು ವೆಂಕಟಾಚಲ ರೂಪದಲ್ಲಿ ಕಲ್ಲುಸಕ್ಕರೆಯಂತೆ ಹೆಪ್ಪುಗಟ್ಟಿವೆ. ಇದು ಭಕ್ತರ ಮೇಲಿನ ಅನುಗ್ರಹಕ್ಕಾಗಿಯೇ ಎಂದು ಹೇಳಿದ್ದಾರೆ. ಶ್ರೀನಿವಾಸನು ಸ್ವಾತಂತ್ರವನ್ನು ಕಳೆದುಕೊಂಡು ದಯಾದೇವಿಗೆ ವಶವಾಗಿರುವುದನ್ನು 'ಸ್ವಾಧೀನ ವೃಷಗಿರೀಶಾಂ' - ಎಂದು ಹೇಳಿ ನೀರಿಗೆ ಶೈತ್ಯ ಹೇಗೆ ಸ್ವಭಾವವೋ ಹಾಗೆಯೆ ವೆಂಕಟನಿಗೆ ದಯೆ ಎಂಬುದು ಸ್ವಾಭಾವಿಕ ಗುಣ, ಇದರಿಂದಲೇ ಇವನ ಇತರ ಗುಣಗಳು ಪ್ರಕಾಶಗೊಳ್ಳುವುವು. ಭಗವದ್ಗುಣಗಳೆಂಬ ದಯಾವರ್ಷದಿಂದಲೇ ಶ್ರೀನಿವಾಸನೂ ದಯಾನಿಧಿ, ಕಲ್ಯಾಣಗುಣಾಕಾರನಾಗಿರುವುದು. ಅವನ ಸ್ವರೂಪಕ್ಕೆ ಎರಡರಷ್ಟು ದೊಡ್ಡದು ದಯೆಯ ಸ್ವರೂಪ 'ಸ್ವರೂಪದ್ವೈಗುಣ್ಯದ್ವಿಗುಣ ನಿಜಬಿಂದು ಪ್ರಭವಸಿ' ಎಂದು ವರ್ಣಿಸಿರುತ್ತಾರೆ (೬೧). ಇಂಥಾ ಗುಣಗಳನ್ನು ವೇದವೇ ಕೊಂಡಾಡುವಾಗ ದಯಾದೇವಿಯೂ ಎಲ್ಲರ ಮಹಾ ವಿಶ್ವಾಸಕ್ಕೆ ಪಾತ್ರಳಾಗುವಳು. ಇವಳು ಮೃದುಹೃದಯಿ, ಪರದುಃಖವನ್ನು ಸಹಿಸಳು. ಶ್ರೀನಿವಾಸನ ಪಾದಗಳಿಂದ ಉದ್ಭವಿಸಿ ನಯನದಲ್ಲೇ ಇವಳು ಯಾವಾಗಲೂ ನೆಲೆಸಿ ಕರುಣೆ ತುಂಬಿರುವಂತೆ ಕಾಣುವಳು (೧೯) ಇವೇ ಚಿತ್ತಾಕರ್ಷವಾಗಿ ಎಲ್ಲರನ್ನೂ ಪದೇ ಪದೇ ಬರುವಂತೆ ಮಾಡುವ ಅತೀಂದ್ರಿಯಗಳಾಗಿವೆ ಎಂಬ ಭಾವಾರ್ಥದಲ್ಲಿ ಮಾರನ್ ತಿರುವಿರುತ್ತಂನಲ್ಲಿ (೪೫) 'ಪೆರುಂಕಳಿಲಾಲ್ ತಂ ಪೆರುಂಕಣ್ಮಲರ್ ಪುಂಡರೀಕಂ ನಮ್ಮೇಲ್' ಎಂದು ಅಭಿಪ್ರಾಯ ಪಡುತ್ತಾರೆ. ಅಂದರೆ ಪ್ರತಿ ಗುರುವಾರ ಎಲ್ಲರಿಗೂ ದಯಾದೇವಿಯ ಪ್ರತ್ಯಕ್ಷ ಕಟಾಕ್ಷ ಲಭ್ಯ ಎಂದು ಅರ್ಥ. ದಿನೇ ದಿನೇ ಏರುತ್ತಿರುವ



ಕಲ್ಪ ವೃಕ್ಷ ವಾಹನ

ಯಾತ್ರಾರ್ಥಿಗಳ ಸಂಖ್ಯೆಗೆ ಇದೂ ಒಂದು ಕಾರಣವಾಗಿದೆ.

ಮಹಿಮೆ : ದಯಾದೇವಿಯ ಮಹಿಮೆಯನ್ನು ಹೇಳುವಾಗ ಶ್ರೀನಿವಾಸನ ಲೀಲಾ ವ್ಯಾಪಾರ ಮತ್ತು ಚೇತನೋದ್ಧಾರದಲ್ಲಿ ದಯೆಯ ಪಾತ್ರವನ್ನು ದೀರ್ಘವಾಗಿ ವಿವರಿಸುವರು. ಶ್ರೀನಿವಾಸನು ಸರ್ವಾಭೀಷ್ಟ ಫಲಪ್ರದನಾಗುವುದಕ್ಕೆ ದಯಾದೇವಿ ಕಾರಣ. ಇಂಥಾವಳಿಗೆ 'ಅಭಿಷ್ಟಾಮಿ' (೧೦) ಎಂದು ಹೇಳಿ ತೂಪುಲ್ ಅಮ್ಮಾನ್ 'ನಿರಂತರವಾಗಿ ಸ್ತುತಿಸುವೆನು' ಎಂದು ಪ್ರತಿಜ್ಞೆ ಮಾಡುವರು. ಭಗವಂತನ ಸೃಷ್ಟಿಸ್ಥಿತ್ಯಾದಿಗಳು ದಯಾಪ್ರೇರಿತವಾದುದು. ಲೋಕ ಕಲ್ಯಾಣಕ್ಕಾಗಿ ಆಗುವ ಅವತಾರಗಳಲ್ಲೆಲ್ಲಾ ಇವಳು ಅನುಪ್ರವೇಶಮಾಡುವಳು. ಅವತಾರಗಳಲ್ಲಿ ಇವಳ ಪ್ರತ್ಯಯವೇನು ಎಂಬುದನ್ನು ವೆಂಕಟನಾಥರು ೧೦ ಪದ್ಯಗಳಲ್ಲಿ (೮೦ - ೯೦) ಹೇಳಿ ಅಲ್ಲಲ್ಲಿ ಅದ್ಭುತ ಹೋಲಿಕೆಗಳನ್ನು ಕೊಡುವರು. ಇಡೀ ಪ್ರಕೃತಿಯೇ ಚಿತ್ರಪಟವೆಂದೂ ದಯಾದೇವಿಯೇ ಕುಂಚ ಮತ್ತು ಶ್ರೀನಿವಾಸನೇ ವರ್ಣಶಿಲ್ಪಿ (೫೦). ದಯೆ ಗಂಗೆಗಿಂ



ಮುತ್ತಿನ ಚಪ್ಪರ ವಾಹನ

ತಲೂ ಪವಿತ್ರವಾದುದು. ಗಂಗೆ ಲೋಕವನ್ನು ಪಾವನಗೊಳಿಸಿದರೆ, ದಯಾದೇವಿ ಮುಲ್ಲೋಕಗಳನ್ನು ಸಂರಕ್ಷಿಸುವವಳಾಗಿದ್ದಾಳೆ. ಇಬ್ಬರೂ ಶ್ರೀನಿವಾಸನ ಪಾದೋದ್ಭವೆಯರು. ಗಂಗಾ ಪ್ರವಾಹದಲ್ಲಿ ಹಂಸ ಮತ್ಸ್ಯ ಕೂರ್ಮ ಇತ್ಯಾದಿ ಅವತಾರಗಳೇ ಇವೆ! 'ಪ್ರಕಟಿತ ಹಂಸ ಮತ್ಸ್ಯ ಕಮಠಾದ್ಯಾವತಾರ ಶತಾವಿಬುಧ ಸರಿಚ್ಛ್ರೇಯಂ' (೫೫). ಕರುಣಾಕಾಕುತ್ಸ್ಥ, ರಿಪುಣಾಮಪಿವತ್ಸಲಃ ಎಂದು ಪ್ರಕಾಶಿತನಾಗಿರುವುದು, ಸೇತುನಿರ್ಮಾಣವಾಗಿರುವುದೂ ಇವಳಿಂದಲೇ. ಶಿಕ್ಷೆಗೊಡುವಾಗಲೂ ರಕ್ಷಣೆಯನ್ನೇ ಮನಸಿನಲ್ಲಿಟ್ಟುಕೊಂಡಿರುವನು. ಸಾಗರಂ ಶೋಷಯಿಷ್ಯಾಮಿ ಎಂದು ಶ್ರೀರಾಮ ಬ್ರಹ್ಮಾಸ್ತ್ರವನ್ನು ಹೂಡಿದಾಗ, ಸಮುದ್ರರಾಜನು ಓಡಿಬಂದು ಶರಣಾದ. ಹೂಡಿದ ಶಸ್ತ್ರವನ್ನು ಸಾಗರರಾಜನ ಶತ್ರುಗಳ ವಧೆಗಾಗಿ ಉಪಯೋಗಿಸಿದ್ದು ಇವಳಿಂದಲೇ. ದಯೆಗೆ ಪರತಂತ್ರನಾದಮೇಲೆ ಭಕ್ತರ ಅಪಕಾರಗಳನ್ನು ಒಂದನ್ನೂ ಎಣಿಕೆಗೆ ತೆಗೆದುಕೊಳ್ಳುವುದಿಲ್ಲ. 'ನಸ್ಮರತ್ಯಪಕಾರಾಣಾಂ ಶತಮಪ್ಯಾತ ವತ್ತಯಾ' ಎಂದು ಹೇಳಿ ಶ್ರೀರಾಮನ ಗುಣಗಳಲ್ಲಿ ದಯೆಯನ್ನು ಉಲ್ಲೇಖಿಸಿರುತ್ತಾರೆ (೬೪). ಸೀತಾಮಾತೆಯಲ್ಲಿ ಅಸಹ್ಯಾಪಚಾರ ಪಟ್ಟುವನಿಗೆ ಕೊಟ್ಟ ಲಘು ದಂಡನೆ ದಯಾಪ್ರೇರಿತವಾದುದು. ವಿಧಿಸುವ ಶಿಕ್ಷೆ ಫಲಕಾರಿಯಾಗುವುದು ದಯಾದೇವಿಯ ವಿಲಾಸದ ವೈಭವವೇ ಸರಿ. ಪ್ರಹ್ಲಾದ ನಂಥಾ ಮಹಾಭಕ್ತನ ಮೇಲೆ ಜಾಯಮಾನಕಟಾಕ್ಷವಾಗಿದ್ದು ಕ್ರಮೇಣ ನಾರದ ಮಹರ್ಷಿಗಳಿಂದ ಮಾರ್ಗದರ್ಶನವಾಗಿದ್ದೂ ಇವಳ ಕಾರ್ಯವೇ. ಪಾಪಗಳಿಂದ ಮೂರ್ಛೆ ಹೋದವರಿಗೆ ದಯಾದೇವಿ ಸಂಜೀವಿನಿ ಇದ್ದಂತೆ (೧೨) ಈ ಸಿದ್ಧೌಷಧ ಅಂಜನಗಿರಿಯಲ್ಲಿ ಪ್ರಕಾಶಿಸಿದೆ. ಇವಳ ಪ್ರಭಾವಕ್ಕೊಳಗಾದವನನ್ನು ಶ್ರೀನಿವಾಸ ಕ್ಷಮಿಸುವನು. ದಶಾವತಾರಿಯಾದ ವೃಷಗಿರಿಪತಿಯು ಹಿಂದೆ ಗುಹ, ಸುಗ್ರೀವ, ಶಬರಿ, ಕುಚೇಲ ಕುಬ್ಜೆ ಗೋಪಿಯರ ಜೊತೆ ಸಮರಸವಾಗಿ ಮೆರೆದು ಸೌಶೀಲ್ಯ ತೋರಿದ್ದು ಇವಳಿಂದಲೇ. ೭೨ - ೭೩ ನೆ ಪದ್ಯಗಳಲ್ಲಿ ಕವಿಸಿಂಹರು ದಯಾದೇವಿಯನ್ನು ಏಣಿಗೆ ಹೋಲಿಸುವರು. ಊರ್ಧ್ವಗತಿಗೇರಲು ಹಾಗೂ ಭಗವಂತನು ವಿಭವ - ಅರ್ಚಾವತಾರಿಯಾಗಿ ಇಳಿಯಲು ದಯೆ ಎಂಬ ಏಣಿ ಸಹಾಯಮಾಡುವುದು. ಕೇವಲ ಕರುಣೆಯಿಂದಲೇ ವೈಕುಂಠವನ್ನು ನಿರ್ಗಮಿಸಿ ಸಪ್ತಗಿರಿಯಲ್ಲಿ ನಿಂತು ಆ ಪರಿಸರದಲ್ಲಿರುವ ಜೀವಿಗಳೆಲ್ಲರನ್ನು ಕೃಪೆ ಮಾಡಲು ಸಂಕಲ್ಪಮಾಡಿದ್ದನ್ನು ಶ್ರೀಮದಾಚಾರ್ಯರು 'ದೇಹಿನಿ' (೪೮) ಎಂದು ಹೇಳಿರುತ್ತಾರೆ. ಶ್ರೀನಿವಾಸನು ಯಾವರೀತಿ ಬಡವರ ಬಂಧು, ದೀನ ದಲಿತರದೈವವಾಗಿದ್ದಾನೆ ಎಂಬುದನ್ನು 'ಕೃಪಣಜನ' ಎಂದು ಕರೆದಿರುವರು (೧೪) ಅವನು ಸಕಲ ಜನರ ಬಂಧು ಎಂದು ಶ್ರುತಿಯೂ ಹೇಳಿದೆ.

೧. ತ್ವಂಜಮಿರ್ಜುನಾನಾಂ ಮಿತ್ರೋ ಅಸಿ ಪ್ರಿಯ : ಸಖಾಸಖೀಭ್ಯ ಈಡ್ಯ (ಋI ೭೫-೪)
೨. ಜಾಮಯ : (ಋI ೩೧-೧೦) ಇಂದು ಲಕ್ಷಾಂತರ ಯಾತ್ರಾರ್ಥಿಗಳು ಧಾವಿಸಿ ಬರುವರು. ಇದರಲ್ಲೇನೋ ಇದೆ ಎಂದು ಕಲ್ಪಿಸಿಕೊಂಡು ಮಹಾತ್ಮೆ ಅಪ್ಪಾಗಿ ತಿಳಿಯದವರೆ



ಚಂದ್ರ ಪ್ರಭ ವಾಹನ

ಹೆಚ್ಚು. ಧರ್ಮ ಛತ್ರದಲ್ಲಿ ತಂಗುವವರು, ಎಷ್ಟೇ ವಿಳಂಬವಾಗಲಿ ತಾಳ್ಮೆಯಿಂದ ಸರದಿ ಸಾಲಿನಲ್ಲೇ ಬಂದು ದರ್ಶನಮಾಡುವ ಬಡವರಿಗಾಗಿ ಹೆಚ್ಚು ದರ್ಶನ ವೇಳೆ ಮೀಸಲಾಗಿರಿಸುವುದು, ಅಂಗವಿಕಲರಿಗೆ ತಕ್ಷಣವೇ ದರ್ಶನ ಮುಂತಾದ ಸತ್ಕಾರ್ಯಗಳೆಲ್ಲಾ ಶ್ರೀನಿವಾಸನ ದಯೆಯಿಂದಲೇ. ಇಂಥಾವರು ವಿವೇಕಿಗಳಾಗಿ ನಿತ್ಯೈಶ್ವರ್ಯವಂತರಾಗಿರುವುದೂ ಆ ದಯೆಯಿಂದಲೇ. ಪಾಪಗಳನ್ನು ಕಡಿದು ಹಾಕುವುದರಿಂದಲೇ ವೆಂ+ಕಟ ಎಂದು ಹೇಳುವುದು. ಪಾಪಗಳನ್ನು ಜಯಿಸಲು ಸಪ್ತಗಿರಿಯನ್ನು ಶ್ರೀನಿವಾಸನೇ ಆಶ್ರಯಿಸಿರುವುದರಿಂದ ವೆಂಕಟಾದ್ರಿ ವಿಜಯಸ್ಥಾನವಾಯಿತು. ಆದ್ದರಿಂದ ದಯಾನದಿಯಾಗಿ ಸಪ್ತಗಿರಿಯಲ್ಲಿ ಹರಿಯುವ ನದಿಗಳು ಪಾಪನಾಶಿನಿ. ಉಚ್ಚನೀಚ ಭಾವನೆ ಇಲ್ಲದೆ ಸಮವಾಗಿ ಎಲ್ಲರ ಮೇಲೂ ಹರಿಯುವ ಕಲ್ಪಲತೆ ಇವಳು. ಈ ಪ್ರವಾಹಕ್ಕೆ ಸಿಗದ ವಸ್ತುವಿಲ್ಲ. ಯಾರೂ ಇದನ್ನು ತಡೆಯಲಾಗದು. ಶ್ರೀನಿವಾಸನನ್ನೇ ವಿಸ್ಮಯಗೊಳಿಸುವಂಥಾವಳು ಇವಳು. ಇದನ್ನು ದೇಶಿಕರು 'ಅವಾರ್ಯ' ಎಂದು ಹೇಳಿದ್ದಾರೆ. ಸಪ್ತಗಿರಿ ಪ್ರದೇಶದಲ್ಲಿ ಇಂದು ನಾವು ಕಾಣುತ್ತಿರುವ ನಗರಾಭಿವೃದ್ಧಿ, ವಿದ್ಯಾಸಂಸ್ಥೆಗಳು, ವಿಶ್ವವಿದ್ಯಾಲಯ, ವ್ಯಾಪಾರ ಸಂಕೀರ್ಣ, ಆಸ್ಪತ್ರೆಗಳು, ಯಾತ್ರಾರ್ಥಿಗಳಿಗಾಗಿ ಸ್ವರ್ಗಭೋಗವೋ ಎಂಬಂತೆ ಶ್ರೇಷ್ಠ ಗುಣಮಟ್ಟದ ಸೌಲಭ್ಯಗಳು 'ಬರ್ಡ್' ನಂತಹ ವಿಶೇಷ ಸಂಸ್ಥೆಗಳು, ಜೀರ್ಣೋದ್ಧಾರ ಎದುರು ನೋಡುತ್ತಿರುವ ದೇವಸ್ಥಾನಗಳಿಗೆ ಅನುದಾನ, ದೇವಸ್ಥಾನಗಳಿಗೆ ಅರ್ಚಾಮೂರ್ತಿ ಹಾಗೂ ಕೊಡೆಗಳನ್ನು ಉಚಿತವಾಗಿ ಕೊಡುವುದು, ವಿದೇಶಗಳಲ್ಲಿ ತಿರುಪತಿ ಇನ್ನೂ ಮುಂತಾದ ಸರ್ವಾಂಗೀಣ ಅಭಿವೃದ್ಧಿಕಾರ್ಯಗಳೆಲ್ಲವೂ ಶ್ರೀನಿವಾಸನದಯೆಯಿಂದಲೇ ಆಗಿರತಕ್ಕವು. ಮುಂಬರುವ ಭಯಂಕರ ವಿಪತ್ತುಗಳು ನಿವಾರಣೆಯಾಗಬೇಕಾದರೂ ದಯಾದೇವಿಯೇ ಕಾರಣ. ಇಲ್ಲಿ ದೇಶಿಕಾಚಾರ್ಯರು ಭಗವಂತನ ಸಂಕಲ್ಪವನ್ನು ನರ್ತಕಿಗೆ ಹೋಲಿಸಿ ಅವಳನ್ನು ಆಡಿಸುವ ದಯಾದೇವಿ ಪ್ರಳಯವೆಂಬ ಭಯಂಕರ ನರ್ತನವನ್ನು ತಪ್ಪಿಸಿ ಪ್ರಸನ್ನವೆಂಬ ನರ್ತನವನ್ನು ಕೈಗೊಳ್ಳುವಂತೆ ಮಾಡುವಳು ಎಂದು ಪ್ರತಿಪಾದಿಸುವರು (೨೩) ಸಪ್ತಗಿರಿಯೇ ತಮ್ಮ ಶಾಶ್ವತ ವಾಸಸ್ಥಾನವಾಗಬೇಕೆಂದು ದಯಾದೇವಿಯನ್ನು ಪ್ರಾರ್ಥಿಸುವರು. ಯಾವುದಾದರೊಂದು ಸ್ಥಾವರ ಜಂಗಮವಾಗಿ ನೆಲೆಸುವ ಕುಲಶೇಖರಾಳ್ವಾರರ ಸ್ತುತಿ ಹಾಗೂ ಕೈಕಾಲುಗಳು ದೇಹ ಚೆನ್ನಾಗಿರುವಾಗಲೇ ವೇಂಗಡವನ್ನು ಚೆನ್ನಾಗಿ ಸೇವಿಸಬೇಕು ಎಂಬ ನಮ್ಮಾಳ್ವಾರ್ ಭಕ್ತಿಸಾರರ ಸ್ತುತಿಯನ್ನು ಆಚಾರ್ಯರು ಉಲ್ಲೇಖಿಸಿರುತ್ತಾರೆ. ಅವನ ಭಾರ್ಯೆಯರೂ ದಯೆಯ ಪ್ರತಿಬಿಂಬ ಎಂದು ಹೇಳಿ [illegible]ಪ್ರುಲ್ ಅಮ್ಮಾನ್ ಸ್ತ್ರೀಯ ಸಹಜ ಸ್ವಭಾವ ಕರುಣೆ ಎಂದು ಸಾಬೀತು ಪಡಿಸುವರು. ಆದ್ದರಿಂದಲೇ ಶ್ರೀನಿವಾಸನು ಇವಳಲ್ಲಿ ನಿರ್ವ್ಯಾಜವಾದ ಹಾಗೂ ಸ್ಥಿರವಾದ ಸ್ನೇಹವಿಟ್ಟಿರುವನು. ಇವಳ ಕಾರ್ಯವನ್ನು ಶ್ರೀ ಭೂ ನೀಳಾದೇವಿಯರು ಶ್ಲಾಘಿಸುವರು. ಇವಳಿಂದಲೇ ಬ್ರಹ್ಮೇಂದ್ರರುದ್ರರೇ ಮೊದಲಾದವರು ತಮ್ಮ ಪದವಿಗಳಲ್ಲಿ ಯಶಸ್ಸು ಪಡೆದಿರುವವರಾಗಿರುತ್ತಾರೆ. ಸ್ವರ್ಗಾದಿ ಫಲವನ್ನು ಬಯಸುವವರಿಗೂ ಫಲವನ್ನು ಕೊಡುವವಳು ಇವಳೇ. ಇಂಥಾ ದಯೆ ಮತ್ತಾರಲ್ಲಿಯೂ ಕಾಣಲಾಗದು.



ಗರುಡ ವಾಹನ                                                                                    ಗಜವಾಹನ

ಕಲ್ಕಿ ರೂಪಿಯಾದ ಶ್ರೀನಿವಾಸನು ಕರದಲ್ಲಿ ಹಿಡಿದಿರುವ ಕತ್ತಿ ಮಾಡುವ ವ್ಯಾಪಾರವೂ ದಯಾ ಪ್ರೇರಿತವಾದುದು. ಕಲಿಯುಗದ ತಾಪವನ್ನು ತ್ತೊಳೆದು ಹಾಕಿ ಕೃತಯುಗದ ಮೊಳಕೆಯನ್ನು ಹಾಕುವುದು. ಈ ಶಸ್ತ್ರವು ದಯೆ ಎಂಬ ಜಲದಲ್ಲಿ ಚೆನ್ನಾಗಿ ಸಂಸ್ಕರಿಸಲ್ಪಟ್ಟಿದೆ. ಇದರಿಂದ ದಯಾ ವರ್ಷವೇ ಆಗುವುದು. ಸ್ವಾಮಿ ದೇಶಿಕನ್ ಇಲ್ಲಿ ಶ್ರೀನಿವಾಸನ ಸರ್ವಾದೇವತಾ ಸಾರ್ವಭೌಮತ್ವವನ್ನು ಹೇಳಿ ಪರತತ್ವವನ್ನು ಪ್ರಕಾಶಪಡಿಸಿದ್ದಾರೆ.

ಚೇತನೋದ್ಧಾರದಲ್ಲಿ ದಯಾದೇವಿಯ ಪಾತ್ರವನ್ನು ರಸವತ್ತಾಗಿ ವಿವರಿಸಿರುವರು. ಪ್ರಥಮವಾಗಿ ದಯೆಯನ್ನು ಆಶ್ರಯಿಸುವ ಸಾರಜ್ಞರನ್ನು ಪ್ರಶಂಸಿಸಲಾಗಿದೆ (೪೧) ಇವರಿಗೆ ಶ್ರೀನಿವಾಸನು ಶಾಸ್ತ್ರವೆಂಬ ಅವಲಂಬನವನ್ನು ಕೊಟ್ಟಿರುವನು. ಸಂಸಾರದಲ್ಲಿ ತೊಳಲಾಡುವವರನ್ನು ಎತ್ತುವ ಕೈಯೇ ಶಾಸ್ತ್ರ. ಸಾರಜ್ಞನಾದವನು ಭಗವಚ್ಛಾಸ್ತ್ರವನ್ನು, ಆಜ್ಞೆಯನ್ನು ಎಂದಿಗೂ ಮೀರನು. ಈ ವಿವೇಕಿಯು 'ತಸ್ಮಿನ್ ಪರಾವಾರೆ' ಎಂಬಂತೆ ದಯಾನಿಧಿಯನ್ನು ಆಶ್ರಯಿಸಿದಮೇಲೆ ಬೇರೆ ಸುಖಾನುಭವಗಳನ್ನು ನೋಡನು. 'ಭಾವೋ ನಾನ್ಯತ್ರ ಗಚ್ಛತಿ' ಎಂದು ಭಾವಿಸಿಕೊಂಡು ನಿತ್ಯ ಕೈಂಕರ್ಯವೆಂಬ ಬ್ರಹ್ಮಾನಂದವನ್ನು ಪಡೆಯುವನು.

ಇಂಥಾ ಜ್ಞಾನ ಸ್ವರೂಪವಾದ ಸ್ತನ್ಯವು ನಮಗೆ ದೊರಕುವುದು ದಯೆಯಿಂದಲೇ 'ವಂದೇ ಚೈತನ್ಯಸ್ತನ್ಯ ದಾಯಿನಿ' (೧೮) ಎಂದು ಹೇಳುವರು ದೇಶಿಕರು. ಚೇತನರನ್ನು ಸಲಹುವಾಗ ಶ್ರೀನಿವಾಸನು ತನ್ನ ಶಕ್ತಿವೀರ್ಯಾದಿಗಳನ್ನು ಮರೆತು ಕರುಣೆಯನ್ನು ತೋರುವನು. ಭಗವನ್ನಿಗ್ರಹವನು ಮರೆಸಿ, ಅನುಗ್ರಹವನ್ನು ಮೆರೆಸುವ ಮಹಿಮೆ ದಯಾ ದೇವಿಗೆ ಮಾತ್ರ ಇದೆ. ಚೇತನರನ್ನು ಸಂಸಾರಸಾಗರದಿಂದ ದಾಟಿಸುವ ದಯಾದೇವಿಯನ್ನು ದೇಶಿಕರು 'ಸಂಸಾರತಾರಿಣೀಂ' ಎಂದಿದ್ದಾರೆ. 'ಅಹಂ ಸ್ಮರಾಮಿ ಮದ್ಭಕ್ತಂ' ಎಂದು ವರಾಹದೇವರು ಹೇಳಿರುವಂತೆ ತಿಳಿದೊ ತಿಳಿಯದೆಯೋ ಮಾಡಿದ ಸುಕೃತಗಳ ನೆಪಮಾಡಿಕೊಂಡು ಮೋಕ್ಷಾರ್ಥಿಯನ್ನು ತಾನೆ ಗುರುತಿಸಿ ಪುರುಷಾರ್ಥವನ್ನು ಕರುಣಿಸುವಳು (೨೦) ಶ್ರೀನಿವಾನನ್ನು ರೈತನಿಗೆ ಹೋಲಿಸಲಾಗಿದೆ. ದಯಾದೇವಿ ಸಮಯ ಸಂಜೀವಿನಿಯಾಗಿ ಪ್ರವಹಿಸಿ ಭೂಮಿಯನ್ನೂ ರೈತನನ್ನೂ ಆನಂದಗೊಳಿಸುವಳು (೨೧) ಸಂಸಾರಿ ಚೇತನರನ್ನು ಆಕರ್ಷಿಸಿ ವಶಪಡಿಸಿಕೊಳ್ಳುವ ಸಾಧನವಾದ ಶ್ರೀನಿವಾಸನ ದಿವ್ಯ ಮಂಗಳ ವಿಗ್ರಹವು ದಯಾದೇವಿಯ ಅಮೃತಾಂಶಸ್ವರೂಪ (೨೨) ಭಗವದ್ಭಾಗವತ ವಿರೋಧಿಗಳಿಗೆ ಇವಳು ದೂರವಿರುವಳು. ದಯಾದೇವಿ ಸಮೀಪದಲ್ಲೇ ಸದಾ ಕಾಲವೂ ಇದ್ದರೂ ಇಂಥವರು ಗಂಗೆ ಹರಿಯುತ್ತಿದ್ದರೆ ಬೇರೆ ಕಡೆ ಬಾಯಾರಿಕೆಗಾಗಿ ಹೋಗುವರು. ಅವಿದ್ಯೆ - ಅಜ್ಞಾನದಿಂದುಂಟಾದ ದುಷ್ಕೃತಗಳನ್ನು ಮಾಡಿದವನು ತಾನು ಮಾಡಿದ ಅಪರಾಧಗಳಿಗೆ ಭಯಪಡುವನು. ನಷ್ಟಸ್ಮೃತಿಯಲ್ಲಿರುವವರು ಹಾಗೂ ಯಾರಲ್ಲಿ ಅಪರಾಧ ಅಧಿಕವಾಗಿದೆಯೋ ಅವರು ಶ್ರೀನಿವಾಸನ ದಯೆಯನ್ನು ಎದುರು ನೋಡುತ್ತಾರೆ. ಇಲ್ಲಿ ಶ್ರೀನಿವಾಸನು ನ್ಯಾಯಾಧೀಶನಸ್ಥಾನದಲ್ಲಿರುತ್ತಾನೆ. ದಯಾದೇವಿಯು ಅಪರಾಧಿಯ ಪರವಾಗಿ ವಾದಮಾಡಿ ಶ್ರೀನಿವಾಸನು ಕೊಡುವ ತೀರ್ಪನ್ನು ಇವನ ಪರವಾಗಿರುವಂತೆ ಮಾಡುವಳು. ಪಾದಗಳನ್ನು ಆಶ್ರಯಿಸಿ ಬಂದವರ ಪಾಪಗಳು ಪರಿಹಾರವಾಗುವುದು ಎಂಬ ಪ್ರಮಾಣವನ್ನು ಮುಂದಿಟ್ಟು ಅಂಥಾ ಚೇತನರಿಗೆ ಸದ್ಗತಿ ಕೊಡಬೇಕೆಂದು ವಾದಮಾಡುವ ವಕೀಲಳಾಗಿದ್ದಾಳೆ. (೩೩) ಎಂಥಾ ದುರ್ವಿನೀತರ ಮೇಲೂ ಕೃಪೆಮಾಡುವ ಕಾಮಧೇನು ಇವಳು. ಶ್ರೀನಿವಾಸನನ್ನು ಬೇಟೆಗಾರನಿಗೆ ಹೋಲಿಸಲಾಗಿದೆ. ಪ್ರಾಣಿಗಳು ಎಲ್ಲೇ ಹೋಗಲಿ ಬಲೆ ಬೀಸಿ ಕಟ್ಟಿಹಾಕುವಂತೆ ಇಂಥಾ ಅಪರಾಧ ಚಕ್ರವರ್ತಿಗಳನ್ನು ಶ್ರುತಿ 'ಅವಿದ್ವಾಂಸಃ' ಎಂದು ಕರೆ



ಸಿಂಹವಾಹನ

ಹಂಸವಾಹನ

ದಿದೆ. (ಋ vi ೧೫-೧೦) ತೂಪ್ಪುಲ್ ಅಮ್ಮಾನ್ ೫೨ ನೆ ಪದ್ಯದಲ್ಲಿ ದಯೆ ಸಂಸಾರಸಾಗರ ದಾಟುವ ಸೇತುವೆ ಎಂದು ಹೇಳಿದ್ದಾರೆ. ಪ್ರತ್ಯಕ್ಷವಾಗಿ ಗುಪ್ತಗಾಮಿನಿಯಾಗಿ ಹರಿಯುವ ಸರಸ್ವತಿ ನದಿಗೆ ದಯೆಯನ್ನು ಹೋಲಿಸಿ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಇವಳು ಚೇತನೋದ್ಧಾರ ಮಾಡುವವಳು. ವೃಷಗಿರೀಶದಯೇ ಭವತಿ ಸಪದಿ ಸರಸ್ವತೀವ ಶಮಯತ್ಯಮ ಘಮ ಪ್ರತಿಮಮ್' ಎಂದು ಹೇಳಿ ಇವುಗಳನ್ನು ಆಶ್ರಯಿಸಿದವರಿಗೆ ಫಲಪ್ರಾಪ್ತಿ ತಪ್ಪದು ಎಂದು ಹೇಳುತ್ತಾರೆ. ಮತ್ತೊಂದು ಕಡೆ ಇವಳು ಸಂಸಾರ ಸಾಗರದಾಟುವ ನೌಕೆ ಎಂದು ಹೇಳುವರು. (೩೮) ಭಗವಂತನು ನಮ್ಮನ್ನು ಪಾರುಮಾಡುವ ಸುಭದ್ರ ನೌಕೆ ಎಂದು ಶ್ರುತಿ ವಾಕ್ಯವಿದೆ. 'ಸುಪ್ರಣೀತಿ ನಾವಂ ಸ್ವರಿತ್ರಾಂ ಅನಾಗಸಂ ಅಸ್ರವತೀಂ' (ಋX ೬೩-೧೦)

ದುಷ್ಕೃತಗಳನ್ನು ಮಾಡಿದವರ ಮೇಲೆ ಶ್ರೀನಿವಾಸನು ಕೋಪಗೊಂಡಾಗ ದಯೆ ಯಾವ ರೀತಿ ಶಾಂತಗೊಳಿಸುವಳು ಎಂಬುದನ್ನು ಸ್ವಾಮಿ ದೇಶಿಕನ್ ವಿವರಿಸುವರು. "ಅದು ಸ್ವರೂಪತಃ ಕೋಪವಲ್ಲ. ಸಮುದ್ರದ ಮೇಲ್ಭಾಗ ಬಿಸಿಯಾಗಿದ್ದರೂ ಒಳಭಾಗ ತಂಪಿನಿಂದ ಕೂಡಿರುತ್ತೆ. ಮೇಲಿನ ನೋಟಕ್ಕೆ ಮಾತ್ರ ಅದು ಕೋಪ." ಎಂಥಾ ಮಹತ್ತರ ಪಾಪಗಳು ಶ್ರೀನಿವಾಸನ ಕರುಣೆಯಿಂದ ಕರಗುವಂಥಾದ್ದು. ಇವುಗಳಿಂದ ಪಾರುಮಾಡುವೆನು ಎಂದು ಪ್ರತಿಜ್ಞೆ ಮಾಡು ವಂತಿದ್ದಾಳೆ ಇವಳು. ದಯೆ ಪ್ರವಹಿಸದೇ ಕಾದರೆ ಅವನ ಪಾಪಗಳನ್ನು ಆಶ್ರಯಿಸಬೇಕು. ಇಂಥವರಲ್ಲಿ ಮಾತ್ರ ದಯೆಗೆ ವ್ಯಾಮೋಹವಿರುತ್ತದೆ. ಶ್ರೀನಿವಾಸನೆಂಬ ಸರೋವರದಲ್ಲಿ ದಯೆ ಎಂಬ ಅಮೃತವಿದೆ. ಇದು ಸಕಲ ತಾಪ ಪರಿಹಾರಿ ಹಾಗೂ ನಿತ್ಯಶೀತಲವಾದುದು. ವಿಶ್ವಾಸಿಗಳು ಇದನ್ನಾಶ್ರಯಿಸಿ ಭಗವದನುಭವವನ್ನು ಸವಿಯುವರು. ಸಪ್ತಗಿರಿ ಎಂಬ ಕ್ರೀಡಾಶೈಲದಲ್ಲಿ ಈ ದಿವ್ಯಸರೋವರವಿದೆ.

'ಏಷ ಬ್ರಹ್ಮಪ್ರವಿಷ್ಟೋಽಸ್ಮಿ
ಗ್ರೀಷ್ಮೇ ಶೀತ ಮಿಹಹ್ರದಮ್'

ಪ್ರಪನ್ನನು ಶ್ರೀನಿವಾಸನ ದಯೆಯನ್ನು ಜಾತಕ ಪಕ್ಷಿಯಂತೆ ಆಶ್ರಯಿಸುವನು. ಶ್ರೀನಿವಾಸನೆಂಬ ಕಾಳಮೇಘದಿಂದ ಬರುವುದೇ ದಯಾ ವರ್ಷ, ಶರಣಾರ್ಥಿಯಲ್ಲಿ ದೋಷವಿದ್ದಲ್ಲಿ ಇವಳ ಶಿಫಾರ್ಸಿನಂತೆ ಶ್ರೀನಿವಾಸನು ಅಂಥವರಿಗೆ ಲಘು ದಂಡನೆಯನ್ನು ವಿಧಿಸುವನು. ಕೊನೆಯದಾಗಿ ಹೇಳುವರು. ಇವಳನ್ನರಿಯಲು ವಾಲ್ಮೀಕಿ ಪರಾಶರ ವ್ಯಾಸಾದಿಗಳಿಗೇ ಆಗಲಿಲ್ಲ. ಆ ದಯಾಸಾಗರದಲ್ಲಿಳಿಯಲು ಹೋಗಿ ಹೆದರಿ ದಡದಲ್ಲೇ ನಿಂತುಬಿಟ್ಟರು. ಎಂದು ಹೇಳಿ ಮಹಿಮೆಯನ್ನು ಮುಗಿಸುವರು. 'ಪ್ರಾಚೇತಸ ಪ್ರಭೃತಯ ಅಪಿ ಪರಂತಟಸ್ಥಾಃ' (೧೦೩)

ಹೀಗೆ ತೂಪ್ಪುಲ್ ಅಮ್ಮಾನ್ ದಯಾದೇವಿಯನ್ನು ಭಗವಂತನ ಭಾರ್ಯೆಯಾಗಿ, ಚೇತನ - ಪ್ರಪನ್ನರ ಮಾತೃವಾಗಿ, ಸದ್ಗತಿಗೇರಲು ವಾಣಿಯಾಗಿ, ಸಂಸಾರ ಸಾಗರ ದಾಟುವ ನೌಕೆ - ದೋಣಿ - ಸೇತುವಾಗಿ, ಭೇದಭಾವವಿಲ್ಲದೇ ಎಲ್ಲರಿಗೂ ಫಲಕೊಡುವ ಕಾಮಧೇನುವಾಗಿ ಕೇಳಿದ್ದು ಕೊಡುವ ಕಲ್ಪವೃಕ್ಷವಾಗಿ ಇನ್ನೂ ಅನೇಕ ದೃಷ್ಟಿಕೋನಗಳಿಂದ ನೋಡಿ ಶ್ಲಾಘಿಸಿರುವರು.

ವೇದಾಂತಾಚಾರ್ಯರು ತಾವು ಚೇತನ ಪ್ರಪನ್ನನ ಸ್ಥಾನದಲ್ಲಿದ್ದಂತೆ ಭಾವಿಸಿಕೊಂಡು 'ನಮ್ಮ ಸ್ವರೂಪಸ್ಥಿತಿ ದಯಾದತ್ತವಾದುದು' ಎಂದು ಹೇಳಿ ಪಶ್ಚಾತ್ತಾಪ ಬುದ್ಧಿಯಿಂದ ದಯಾದೇವಿಯ ಮುಂದೆ ಅಂಜಲಿಬದ್ಧರಾಗಿ ನಿಂತು ಅ) ಅಮ್ಮಾ ನಿನಗೆ ಅರ್ಪಿಸಲು ನನ್ನಲ್ಲಿ ನನ್ನ ಅಪರಾಧಗಳನ್ನು ಬಿಟ್ಟರೆ ದೇರೇನೂ ಇಲ್ಲ. ಇವನ್ನು ನಿನಗೆ ಅರ್ಪಿಸುವೆನು. ಸ್ವೀಕರಿಸುವೆಯಾ ನೀನು ಕಟಾಕ್ಷಿಸದಿದ್ದರೆ ನಾನು ಬದುಕಲಾರೆ ನೀನೇ ಸಾಕ್ಷಾತ್ತಾಗಿ ಕ್ಷಮಿಸು' ಎಂದು ಅನುಪಮವಾಗಿ ದೇಡಿದ್ದಾರೆ (೯೭). ಆ) ಅಪರಾಧ ಚಕ್ರವರ್ತಿಗಳಾದ ನಮ್ಮನ್ನು ಕಾಪಾಡಲು ಮನಸ್ಸು ಮಾಡಿ

ಶ್ರೀನಿವಾಸನನ್ನು ಪರವಶಗೊಳಿಸು ಎಂದು ೨೯ ನೇ ಪದ್ಯದಲ್ಲಿ ಬೇಡುವರು. ೩) ಮದಗಜವನ್ನು ಸರಪಳಿಯಿಂದ ಕಟ್ಟಿಹಾಕುವಂತೆ ನನ್ನನ್ನು ಬಂಧಿಸಿ ಎಳೆದುಕೊಂಡು ಹೋಗು. ನೀನೇ ನನ್ನನ್ನು ಬಲಾತ್ಕಾರದಿಂದ ಸ್ವೀಕರಿಸು ಎಂದು ಪ್ರಾರ್ಥಿಸಿರುವರು.

ಇದೇ ಕೃತಿಯಲ್ಲಿ ದೇಶಿಕರು ಶ್ರೀ ವೈಷ್ಣವ ಸಿದ್ಧಾಂತವನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರಕಾಶಪಡಿಸಿದ್ದಾರೆ. ೧)ಪ್ರಾರಂಭ ಶ್ಲೋಕದ ಪ್ರಥಮ ಪದವಾದ 'ಪ್ರಪದ್ಯೇ' ಸಿದ್ಧಾಂತದ ತಿರುಳೇ ಆಗಿದೆ. ೨) ಶ್ರೀನಿವಾಸನ ಕರುಣಾ ಪ್ರವಾಹದಿಂದಲೇ ಉದಿಸಿರುವ ಗುರು ಪರಂಪರೆಯಲ್ಲಿ ವಿರಾಜಿಸುವವರೆಲ್ಲರಿಗೂ ವಂದಿಸುವರು. ಮೊದಲಿಗೆ ಪ್ರಥಮಾಚಾರ್ಯನಾದ ಶ್ರೀನಿವಾಸ ಇವನ ಭಾರ್ಯೆಯರು, ಮಹರ್ಷಿಗಳು, ವಿಶ್ವಕ್ಸೇನ, ಆಳ್ವಾರಾಚಾರ್ಯರಿಗೆ ವಂದಿಸಿ ಇವರೆಲ್ಲರೂ ದಯಾದೇವಿಯ ಮಹಿಮೆಗೆ ಒಳಗಾಗಿ ಭಗವದ್ದಯೆಯನ್ನು ಸಮಸ್ತ ಲೋಕಗಳಿಗೂ ವ್ಯಾಪಿಸುವಂತೆ ಮಾಡಿರುವರು. ೩) ಕೆಲವು ವೇಳೆ ದಯೆ ಆಚಾರ್ಯರೂಪತಾಳಿ ಪಂಚಸಂಸ್ಕಾರ ಭರನ್ಯಾಸಗಳ ಮೂಲಕ ಸದ್ಗತಿಗೇರಲು ಕಾರಣವಾಗುವುದು. ೪) ಬ್ರಹ್ಮಾನಂದ ಅನುಭವ, ಮಹಾವಿಶ್ವಾಸ, ಲಘುದಂಡನೆ, ಸರ್ವೇಶ್ವರತ್ವ, ಸಂಸಾರಬಂಧನ ಭಗವದ್ವಿರೋಧಿಗಳು ಸುಕೃತ - ದುಷ್ಕೃತಗಳು ಇನ್ನೂ ಮುಂತಾದ ಪದಗಳು ಸಿದ್ಧಾಂತ ಪ್ರಕಾಶಗೊಳಿಸುವಂಥವು.

ಫಲಶ್ರುತಿ : ಶ್ರೀನಿವಾಸಸ್ವಾಮಿಯು ಶ್ರೇಷ್ಠ ರೀತಿಯ ದಯಾನಿಧಿ ಎಂಬುದನ್ನು ಎಲ್ಲರಿಗೂ ತಿಳಿಸುವುದೇ ದೇಶಿಕಾಚಾರ್ಯರ ಮುಖ್ಯ ಉದ್ದೇಶ. ಭಕ್ತಿಯ ಪರವಶತೆಯ ಆವೇಶದಲ್ಲಿ ಸ್ತೋತ್ರದ ಜೊತೆಗೆ ಕಾವ್ಯವನ್ನು ವಿಸ್ತರಿಸಿರುತ್ತಾರೆ. ಅಸಂಖ್ಯಾತ ಭಕ್ತರು ಭಗವಂತನ ಕರುಣೆಯನ್ನು ಕುರಿತು ಹಾಡಿರುತ್ತಾರೆ. ಆದರೆ ಹಾಗೆ ಹಾಡಿರುವುದೆಲ್ಲವೂ ಕಾವ್ಯವಾಗಿಲ್ಲ. 'ಯ ಖ್ಯಾತಿ ಲಾಭ ಪೂಜಾಸು' ಎಂಬಂತೆ ತಾವು ಖ್ಯಾತಿಗಾಗಿ ಇದನು ಸ್ತುತಿಸಿ ರಚಿಸಿಲ್ಲ. ಭಕ್ತಿಯಿಂದಲೇ ರಚಿಸಿದ ದೋಷರಹಿತವಾದ ಸ್ತುತಿ ಇದು. ಉದಾರವಾದುದು, ವೇದಾಂತ ತಾತ್ಪರ್ಯ ಪ್ರತಿಪಾದಿಸುವಂಥಾದ್ದು, ಶ್ಲಾಘನೀಯವಾದುದು, ಮಹಿಮಾಯುತವಾದುದು, ಸಾತ್ವಿಕರಿಗೆ ರೋಚಕವಾದ ಸ್ತುತಿ ಇದು. ಸತ್ಯವಾದಿಗಳೂ ಭಕ್ತೋತ್ತಮರೂ ಆದ ವೆಂಕಟನಾಥರಿಂದ ಉದಿತವಾದ ಈ ಕೃತಿಯನ್ನು ನಿತ್ಯಾನುಸಂಧಾನ ಮಾಡುವವರಿಗೆ ದಯಾಮಾತೆ ಖಂಡಿತ ಪ್ರಸನ್ನಳಾಗುವಳು. ಈ ಕೃತಿ ಪ್ರತಿಪಾದಿಸುವ ವಿಷಯ ವೈಭವದ ಕಾರಣ ಇದು ಸರ್ವರಿಂದಲೂ ಸೇವಿಸಲು ತಕ್ಕುದಾಗಿದೆ.

ವೃಷಶೈಲನಾಥ ದೈಯಿತೇ ದಯಾನಿಧೇ



ರಥೋತ್ಸವ



ಚಕ್ರಸ್ನಾನ



# ಶ್ರೀ ವೆಂಕಟೇಶ್ವರಸ್ವಾಮಿ ಆಲಯ

---ಆಂಗ್ಲಮೂಲ: ಡಾ|| ಎನ್. ರಮೇಶನ್.

---ಅನುವಾದ: ಬಿ. ಎನ್. ಶ್ರೀನಿವಾಸನ್.

ಇತರ ಅನೇಕ ದೇವಾಲಯಗಳಂತೆಯೇ ತಿರುಮಲೆಯ ಆಲಯವೂ ಸಹ ಹಲವಾರು ಶಾಸನಗಳನ್ನು ಹೊಂದಿ ಆಲಯದ ಬಗ್ಗೆ ಪೂರ್ಣ ವಿವರವನ್ನೊದಗಿಸಿ ಆಸಕ್ತಿಯನ್ನು ಹೆಚ್ಚಿಸುತ್ತದೆ. ಇಲ್ಲಿನ ಶಾಸನಗಳು, ತಿರುಪತಿ, ತಿರುಚಾನೂರಿನಲ್ಲಿ ಕಂಡು ಬಂದಿರುವ ಶಾಸನಗಳೊಡನೆ ಸೇರಿ ಈ ಪ್ರಾಂತ್ಯದ ಆಲಯ ವ್ಯವಹಾರಗಳ ಬಗ್ಗೆ ಎಂಟು ಹತ್ತು ಶತಮಾನಗಳ ನಿರಂತರವಾದ ದಾಖಲೆಯನ್ನೊದಗಿಸಿವೆ. ಉದಾಹರಣೆಗೆ ವಿಜಯನಗರದ ರಾಜರ - ವಿಶೇಷವಾಗಿ ಕೃಷ್ಣದೇವರಾಯ ಹಾಗೂ ಅಚ್ಯುತರಾಯರ ತಿರುಮಲೆಯ ಯಾತ್ರೆಗಳ ಬಗ್ಗೆ, ಅವರುಗಳು ಆಲಯಕ್ಕೆ ನೀಡಿದ ದಾನಗಳ ಬಗ್ಗೆ, ನಿರ್ಮಿಸಿದ ಕಟ್ಟಡಗಳ ಬಗ್ಗೆ ಪೂರ್ಣ ಮಾಹಿತಿ ದೊರೆತಿದೆ. ತಿರುಮಲೆಯ ಆಲಯದೊಡನೆ ದಕ್ಷಿಣ ಭಾರತದ ಅತಿ ಶ್ರೇಷ್ಠ ಸಾಮ್ರಾಟರಲ್ಲಿ ಒಬ್ಬನಾದ ರಾಜರಾಜ ಚೋಳನು ನೇರ ಸಂಬಂಧ ಹೊಂದಿದ್ದನೆಂಬುದು ಅವನ ಆಳ್ವಿಕೆಯ ೧೬ನೇ ವರ್ಷದ ಒಂದು ತೃಟಿತ ಶಾಸನದಿಂದ ತಿಳಿದು ಬಂದಿದೆ. ಹದಿಮೂರು ಹದಿನಾಲ್ಕನೆಯ ಹಾಗೂ ನಂತರದ ಆಲಯ ಜೀರ್ಣೋದ್ಧಾರ ಕಾರ್ಯಗಳಲ್ಲಿ, ಅಂದಿಗಿಂತ ಮೊದಲು ಇದ್ದ ಅಸಂಖ್ಯ ಶಾಸನಗಳು ಲುಪ್ತವಾಯಿತೆಂಬುದನ್ನು ಈ ಆಸುಪಾಸಿನಲ್ಲಿ ದೊರೆತ ದಂತಿವರ್ಮನೇ ಮೊದಲಾದವರ ಶಾಸನಗಳಿಂದ ತೀರ್ಮಾನಿಸಬಹುದು. ಏನೇ ಆದರೂ ಒಂದು ಸಾವಿರಕ್ಕೂ ಮಿಗಿಲಾದ ದೊರೆತಿರುವ ಶಾಸನಗಳನ್ನು ಸರಿಯಾಗಿ ವಿಶ್ಲೇಷಿಸಿದ್ದೇ ಆದರೆ, ಆಲಯದ ಇತಿಹಾಸದ ಬಗ್ಗೆ ಸಾಕಷ್ಟು ಖಚಿತವೂ, ನಿರಂತರವೂ ಆದ ವಿವರ ದೊರೆಯುತ್ತದೆಯಾಗಿ ಈ ದಿಸೆಯಲ್ಲಿನ ಪ್ರಯತ್ನವನ್ನು ಸಾದರ ಪಡಿಸಲಾಗಿದೆ.

ತಿರುಮಲೆಯ ಆಲಯದಲ್ಲಿ ದೊರೆತಿರುವ ಅತಿ ಪ್ರಾಚೀನ ಶಾಸನ ಕ್ರಿ.ಶ. ೯ನೇ ಶತಮಾನದ ಆದಿಭಾಗದಲ್ಲಿದ್ದ ಬಾಣ ರಾಜಕುಮಾರ ವಿಜಯಾದಿತ್ಯನ ಜನನವನ್ನು ಸೂಚಿಸುತ್ತದೆ. (ತಿ.ತಿ. ೪೨೯) ಈ ರಾಜಕುಮಾರ ತಿರುಚಾನೂರಿನ ಶ್ರೀ ವೆಂಕಟೇಶ್ವರ ಸ್ವಾಮಿಗೆ ಕಾಣಿಕೆ ನೀಡಿದ (ಜೆ.ಟಿ. ೨೨೯).

ಪಲ್ಲವ ರಾಜರಲ್ಲಿ ಈಚಿನವನಾದ ಕೋ ವಿಜಯದಂತಿ ವಿಕ್ರಮ ವರ್ಮನ್ ತಿರುಚಾನೂರಿನ ಎರಡು ಶಾಸನಗಳಲ್ಲಿ ಪ್ರತಿನಿಧಿಸಲ್ಪಟ್ಟಿದ್ದಾನೆ. ಇದರಲ್ಲಿ ಒಂದು ಅವನ ಆಳ್ವಿಕೆಯ ಐವತ್ತೊಂದನೆಯ ವರ್ಷವನ್ನು ಸೂಚಿಸಿ ಇದು ಕ್ರಿ. ಶ. ೮೩೦ಕ್ಕೆ ಹೊಂದುತ್ತದೆ. (ತಿ.ತಿ. ೨೧೯ ಜೆ.ಟಿ. ೧೨೩) ನಂತರದ ಶಾಸನದಲ್ಲಿ ತೇದಿಯಿಲ್ಲ. ಎರಡೂ ಶಾಸನಗಳೂ ಆಲಯದಲ್ಲಿ ನಂದಾದೀಪವನ್ನುರಿಸಲು ನೀಡಿದ ಚಿನ್ನದ ಕಾಣಿಕೆಯನ್ನು ವಿವರಿಸುತ್ತವೆ.

ಎರಡನೇ ಪರಾಂತಕನ ಸಮಕಾಲೀನ ಸುಂದರ ಚೋಳ - ಕೋ ಪಾರ್ಥಿವೇಂದ್ರವರ್ಮ ಒಂದನೇ ಆದಿತ್ಯನಿಂದ ತೊಂಡಮಂಡಲದಿಂದ ಉಚ್ಚಾಟಿಸಲ್ಪಟ್ಟ ಪಲ್ಲವ ದೊರೆಗಳ ವಂಶಕ್ಕೆ ಪ್ರಾಯಶಃ ಸೇರಿರಬೇಕು. ಇವನ ಕೈಕೆಳಗೆ ಶಕ್ತಿ ವಿಟಂಕನ್ ಎಂಬ ಕಾಡವ ಅಧಿಕಾರಿಯಿದ್ದ. ಈ ಶಕ್ತಿ ವಿಟಂಕನ ರಾಣಿ ಸಾಮವೈ ದೇವಾಲಯಕ್ಕೆ ಎರಡು ದಾನಗಳನ್ನು ನೀಡಿದ ದಾಖಲೆಗಳಿವೆ. ಈಕೆ ಒಬ್ಬ ಪಲ್ಲವ ಪೆರ್ಗಡೆಯರ ಮಗಳೆಂದು ಹೇಳಲಾಗಿದೆ. ರಾಜರಾಜ ಚೋಳನ ಮಹಾರಾಣಿ ದಂತಿಶಕ್ತಿ ವಿಟಂಕಿ ಲೋಕಮಹಾದೇವಿಯೊಂದಿಗೆ ಈ ಕಾಡವ ದೊರೆ ಶಕ್ತಿ ವಿಟಂಕನಿಗೆ ಬಂಧುತ್ವವಿದ್ದಿತು.

ಮಣವಾಳಪ್ಪೆರುಮಾಳರಿಗೆ ತಿರುಮುಡಿ, ಮಾಲೆಗಳು, ಉದರ ಬಂಧ, ತಿರುಮರ್ಕೈ ಪಟ್ಟಿಕ್ಕೆ ಬಾಹುವಲಯ, ತಿರುಚಂದನ, ವಡಿಯಲ್, ಕರ್ಕೈಪಾದ ಚಯಲಂ, ಪ್ರಭಾವಳಿ ಮೊದಲಾದ ಅತಿ ಬೆಲೆ ಬಾಳುವ ಆಭರಣಗಳನ್ನು ಸಾಮವೈ ನೀಡಿದಳು. ಎರಡು ವಿಷು ಸಂಕ್ರಾಂತಿಗಳಲ್ಲಿ ಹಾಗೂ ಎರಡು ಅಯನ ಸಂಕ್ರಾಂತಿಗಳಲ್ಲಿ ದಿನವೂ ಅಭಿಷೇಕದ ನಂತರ ಅನ್ನ ನೈವೇದ್ಯಕ್ಕೂ ಏರ್ಪಾಡು ಮಾಡಿದಳು. ಚಿತ್ರ ನಕ್ಷತ್ರದಲ್ಲಿ ಅಂಕುರಾರ್ಪಣೆಯೊಂದಿಗೆ ಆರಂಭವಾಗುವ ಒಂಬತ್ತು ದಿನಗಳ ಪುರಟ್ಟಾಶಿ ಉತ್ಸವಗಳನ್ನೂ, ಅದಕ್ಕೂ ಮೊದಲು ಎರಡು ದಿನಗಳ ಉತ್ಸವವನ್ನೂ ಏರ್ಪಡಿಸಿದಳು (೧೮ ತಿ.ತಿ.) ಮಣವಾಳ ಪ್ಪೆರುಮಾಳರಿಗೆ ಮುಕ್ಕೋಟಿ ದ್ವಾದಶಿಯ ಮೊದಲು ಏಳುದಿವಸಗಳ ಉತ್ಸವಕ್ಕಾಗಿ ವೆಚ್ಚಗಳಿಗೆ ಭೂಮಿಯನ್ನೂ ದತ್ತಿ ನೀಡಿದಳು (೧೯ ತಿ.ತಿ.)

ಒಂದನೇ ಪರಾಂತಕ ಅಥವಾ ಮಧುರೈಕೊಂಡ ಕೋ ಪರಕೇಸರಿವರ್ಮನು ಕ್ರಿ. ಶ. ೯೦೭ ರಿಂದ ೯೫೩ ರವರೆಗೆ ಆಳಿದ. ಅವನ ಶಾಸನವೇ ಆಲಯದ ಅತಿ ಪ್ರಾಚೀನ ಚೋಳಶಾಸನಗಳು. ಅವನ ಆಳ್ವಿಕೆಯ ೨೦ನೇ ಹಾಗೂ ೨೯ ನೇ ವರ್ಷದಲ್ಲಿ ಆಲಯಕ್ಕೆ ದೀಪಗಳನ್ನು ನೀಡಿದ್ದನ್ನಿವು ದಾಖಲಿಸುತ್ತವೆ. (೨೩೨, ೨೩೪ ಜೆ.ಟಿ.) ಜೆ. ಟಿ. ೨೩೨ ಅಂದು ತಿರುಚುಕನೂರು (ತಿರುಚಾನೂರು) ನಲ್ಲಿನ ಪ್ರತಿನಿಧಿ ಸಭೆಯನ್ನು ಕುರಿತು ಹೇಳುತ್ತದೆ. ಇದರಿಂದಾಗಿ ಪಲ್ಲವರಕಾಲದಲ್ಲಿ ಪ್ರಚಲಿತವಿದ್ದ ರಾಜ್ಯ ವಿಭಾಗಗಳೇ ಈ ಕಾಲದಲ್ಲೂ ಪ್ರಚಲಿತವಿದ್ದಿತೆಂದು ತಿಳಿದುಬರುತ್ತದೆ. ತೊಂಡಮಂಡಲವನ್ನು ವಶಪಡಿಸಿಕೊಂಡ ಚೋಳರು ತಮಗೆ ಸಿದ್ಧರೂಪದಲ್ಲಿ ದೊರೆತ ಪಲ್ಲವ ಆಡಳಿತ ವ್ಯವಸ್ಥೆಯನ್ನು ತಮ್ಮದಾಗಿಸಿಕೊಂಡರೆಂದು ತೋರುತ್ತದೆ. ಇರುಂಗೋಲಕನ್ ಅಥವಾ ಗುಣವನ ಪರಾಜಿತನ್ ಸ್ವಲ್ಪ ಸುವರ್ಣವನ್ನು ದತ್ತಿ ನೀಡಿ ಇಬ್ಬರು ಬ್ರಾಹ್ಮಣರಿಗೆ ಸಮಾ



ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಂ. ಕೆ. ಆರ್. ವಿನಾಯಕ್**, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕಗರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
--ಬೋಧಾಯನ ಧರ್ಮಸೂತ್ರ.

**ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.**

ವಂದನೆಗಳೊಡನೆ ತಮ್ಮ ವಿಶ್ವಾಸಿ,

**ಎಂ. ಕೆ. ಆರ್. ವಿನಾಯಕ್**

ರಾಧನೆಯ ಏರ್ಪಾಡು ಮಾಡಿದ (೨೨೦
ಇವನು ಬಹುಶಃ ಒಂದೇ ಪರಾಂತಕನ
ಅಧಿಕಾರಿಯಾಗಿರಬೇಕು.

ಎರಡನೇ ಪರಾಂತಕ ಸುಂದರ ಚೋಳ
ನೇರ ಸಾಕ್ಷಿಯಿಲ್ಲದಿದ್ದರೂ, ತಿರುಮಲೆಯ
ಟೇಶ್ವರ ಆಲಯದ ಜೀರ್ಣೋದ್ಧಾರ ಮಾ
ವೀರನರಸಿಂಹ ಯಾದವರಾಯನ ಆಜ್ಞೆ
ಪುನಃ ಲಿಖಿಸಲಾದ ಒಂದು ಶಾಸನದ ವ
ಫೊನ್‌ಮಾಳಿಗೈ ತೂಜೆನಾನ್ ನ ರಾಣಿ
ಹೇಳಲಾದ ಪರಾಂತಕದೇವಿಯಮ್ಮನ್,
ರಾಜ ಚೋಳನ ಆಳ್ವಿಕೆಯ ೧೬ ನೇ ವ
ದೇವರಿಗೆ ಅನರ್ಘ್ಯ ವಜ್ರಗಳಿಂದ ಕೂಡಿದ
ಪಟ್ಟವನ್ನು ಸಮರ್ಪಿಸಿದಳೆಂದು ತಿಳಿದುಬ
ಈ ಎರಡು ದಾಖಲೆಗಳು ತಿರುಮಲೆಗೆ
ದಾನ ನೀಡಿದ ಪರಾಂತಕ ದೇವಿ ಅಮ್ಮನು
ಚೋಳನ ರಾಣಿಯೆಂಬುದನ್ನು ಖಚಿತ
ತ್ತವೆ.

ಒಂದನೇ ರಾಜರಾಜನು ಮೂರು ಶಾಸ
ಕಂಡುಬರುತ್ತಾನೆ. (೧೭ ತಿ.ತಿ. ೨,೧
ಜಿ.ಟಿ.) ೨೮ ಮುತ್ತುಗಳು. ನಾಲ್ಕು ವಜ್ರಗಳ
ಗೋಮೇಧಿಕಗಳ ೫೨ ಕಳಂಜು ತೂಕದ
ಪಟ್ಟವನ್ನು ಶ್ರೀ ವೆಂಕಟೇಶ್ವರಸ್ವಾಮಿಗೆ
ಪರಾಂತಕದೇವಿ ಅಮ್ಮನ ಶಾಸನವನ್ನು
ಈಗಾಗಲೇ ಹೇಳಲಾಗಿದೆ. ಮಿಕ್ಕೆರಡು
ಗಳೂ ತ್ರುಟಿತವಾಗಿವೆ. ಮೊದಲನೆಯ
ಸ್ತಿಯ ಒಂದು ಭಾಗವನ್ನು ಉಲ್ಲೇಖಿಸಿ
ಡನೆಯದು ರಾಜರಾಜ ಮುವೇಂದವೇ
ಕಳಂಜು ತೂಕದ ಚಿನ್ನವನ್ನು ದೇವರ ದಿ
ಆಲಯದ ಭಂಡಾರಕ್ಕೆ ಜಮೆ ಮಾಡಿದ್ದನ
ಸುತ್ತದೆ.

ತಿ.ತಿ. ೨೦ ನೇ ಶಾಸನದ ಪ್ರಕಾ
ಮಂಡೈಯಂನ ಆಲಯದ ಸಭೈಯಾರರು
ಕರ್ತವ್ಯವಾದ ೨೪ ನೈದೀಪಗಳನ್ನೂ ಆರತಿ
ಮಾಡದೆ ಹೋದಾಗ, ರಾಜೇಂದ್ರ ಚೋ
ಕೆಯ ಮೊದಲವರ್ಷದಲ್ಲಿ ಒಬ್ಬ ಸ್ಥಳೀಂ
ಕಾರಿ ವಿಚಾರಣೆ ನಡೆಸಿ, ವ್ಯವಸ್ಥೆಯನ್ನು ಪ
ಗೊಳಿಸಿದಂತೆ ತಿಳಿದುಬರುತ್ತದೆ. ಈ
ದಲ್ಲಿ ವಿಚಾರಣೆಯ ಪೂರ್ತಿ ವಿವರಗಳಿದ್ದ
ರಣಕರ್ತನು ತಿರುವೆಂಗಡದೇವನ ಆ
ರರು ಸೇವಕರನ್ನು ಕರೆದು ದೇವರಿಗೆ
ನೈವೇದ್ಯ ನೀಡುವ ನಿಮಂದನಪ್ಪಡಿಯಲ್ಲಿ
ರೆಗಳೇನಾದರೂ ಇದ್ದವೇ ಎಂಬುದನ್ನು
ಸಿದ. ದೇವದಾನಕ್ಕೆಂದು ಸ್ವೀಕರಿಸಲಾದ

ಡ್ಯೆಯಂ ಗ್ರಾಮದ ಪಂಚಾಯತಿಯು ೨೩ ಪೊನ್‌ಗಳನ್ನು ಪಡೆದು ಶಿಲಾಶಾಸನೋಕ್ತವಾದಂತೆ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ೨೪ ದೀಪಗಳು ಹಾಗೂ ಒಂದು ಕರ್ಪೂರದ ಆರತಿಯನ್ನು ಬೆಳಗಿಸುವಲ್ಲಿ, ತಮ್ಮ ಕರ್ತವ್ಯಲೋಪಮಾಡಿ, ಗ್ರಾಮಸ್ಥರ ಅಸಾಮರ್ಥ್ಯದಿಂದ ಎರಡೇ ದೀಪಗಳನ್ನು ಬೆಳಗಿಸುತ್ತಿರುವರೆಂದು ಪ್ರಕಟವಾಯಿತು. ವಿಚಾರಣೆಯಿಂದ ತಿರುಮಂಡ್ಯೆಯಂ ಗ್ರಾಮಸಭೆಯ ಉದಾಸೀನ ಮನೋಭಾವ ಹಾಗೂ ನಂಬಿಕೆ ದ್ರೋಹದ ಅರಿವಾದ ಅಧಿಕಾರಿಯು, ತಿರುಚಾನೂರಿನ ತಿರುಮಂಡ್ಯೆಯಂ ಸಭೆಯಲ್ಲಿದ್ದ ೨೦ ಪೊನ್‌ಗಳನ್ನು ಆಲಯಕ್ಕೆ ಹಿಂದಿರುಗಿಸಬೇಕೆಂದೂ, ತಿರುಮಂಡ್ಯೆಯಂ ಸಭೆ ನೀಡಬೇಕಾದ ಆಲಯಕ್ಕೆ ಬಾಕಿಯಿದ್ದ ಮೂರು ಪೊನ್‌ಗಳು ತಿರುಮಂಡ್ಯೆಯಂ ಸಭೆಯವರು ಆಲಯದಿಂದ ಪಡೆದ ಸಾಲವೆಂದೂ, ಆಲಯದ ಅಧಿಕಾರಿಗಳು ಆಲಯಕ್ಕೆ ೨೪ ದೀಪಗಳಿಗೆ ಬೇಕಾದ ತುಪ್ಪವನ್ನೂ ಆರತಿಗೆ ಬೇಕಾದ ಕರ್ಪೂರವನ್ನೂ ಒದಗಿಸಬೇಕೆಂದೂ, ಆಜ್ಞೆ ಮಾಡಿದ.

ತಿರುಮಲೆಯ ಹಲವು ಶಾಸನದ ಕಲ್ಲುಗಳಲ್ಲಿ ಕುಲೋತ್ತುಂಗನ ಐತಿಹಾಸಿಕ ದಾಖಲೆಗಳು ಚೂರುಪಾರಾಗಿ ದೊರೆತಿವೆ. ಒಂದನೇ ಕುಲೋತ್ತುಂಗನ ರಾಣಿಯು ಆಲಯಕ್ಕೆ ಹಾಲು ಮೊಸರುಗಳಿಗಾಗಿ ದಾನ ನೀಡಿದಳು (೭೧ ತಿ.ತಿ.) ಮೂರನೇ ರಾಜರಾಜನ ಆಳ್ವಿಕೆಯ ೧೯ ನೇ ವರ್ಷದಲ್ಲಿನ ತಿರುಪತಿಯ ಗೋವಿಂದರಾಜಸ್ವಾಮಿ ಆಲಯದ ಶಾಸನವು (೧೨೭ ಜಿ.ಟಿ.) ಸ್ಥಳೀಯ ರಾಜಕಾರಣದ ಸಭೆಗಳ ಕೆಲಸಗಳು ಹಾಗೂ ಅಧಿಕಾರಗಳನ್ನು ವಿವರಿಸಿ ಆಲಯಕ್ಕೆ ಬೇಕಾದ ಭೂಮಿಯ ಬೇಣಿಗೆಗಾಗಿ ರಾಜನಲ್ಲಿ ಮನವಿ ಮಾಡುವ ವಿಧಾನಗಳನ್ನು ಕುರಿತು ಹೇಳುತ್ತದೆ. ತಿರುಕ್ಕುಡವೂರಿನ ಪೆರಿಯನಾಟ್ಟಾರನು ಗೋವಿಂದರಾಜಸ್ವಾಮಿ ಆಲಯದಲ್ಲಿ ತಿರುಮಂಗೈ ಆಳ್ವಾರರ ವಿಗ್ರಹವನ್ನು ಪ್ರತಿಷ್ಠಾಪಿಸಿದ, ಆದರೆ ಅದರ ದಿನವಹಿ ಪೂಜೆಗೆ ಏರ್ಪಾಡು ಮಾಡಲಿಲ್ಲ. ಶಠಗೋಪದಾಸರ್ ಪಿಳ್ಳೈ ಮತ್ತಿತರ ಮೂವರು ಆಲೋಚನೆ ನಡೆಸಿ ಆಲಯದಲ್ಲಿ ಪೂರ್ಣಪ್ರಮಾಣದಲ್ಲಿ ಸಮಾವೇಶವಾದ ತಿರುಚಾನೂರು ಸಭೆಯಾರರ ಮುಂದೆ ವಿಷಯವನ್ನು ತಂದಾಗ ಅವರು ಒಂದು ತೀರ್ಮಾನ ಮಾಡಿದರು. ಸಭೆಯಾರರ ತೀರ್ಮಾನ ಶಿಫಾರಸು ಪಾತ್ರ ಮಾತ್ರವೇ ಆದಾಗಲೂ ರಾಜ ಅದನ್ನು ಪೂರ್ತಿಯಾಗಿ ಅನುಮೋದಿಸಿ ಅದರಂತೆ ಕ್ರಮಗಳನ್ನು ಕೈಗೊಳ್ಳಲು ಆಜ್ಞೆ ನೀಡಿದ. ತಿರುಕ್ಕುಡವೂರ್ ನಾಟ್ಟಾರನು, ಕುಡವೂರು ಗ್ರಾಮದ ಮಾರೀಪತ್ತಿನಲ್ಲಿ ಚತುಕ್ಕಿಯೆಂಬ ಅಳತೆಯಲ್ಲಿ ಪಟ್ಟಿಗೆ ಐದು ತುಂಬು ಧಾನ್ಯಬೆಳೆಯುವ ಒಂದು ಸ್ಥಳವನ್ನು ಪೂಜೆಗೆಂದು ಬಿಟ್ಟುಕೊಟ್ಟು ರಾಜಾಜ್ಞೆಯನ್ನು ಅಮಲಿಗೆ ತಂದ. ದೈನಂದಿನ ಪೂಜೆಯ ಸಾಹಿತ್ಯವು ಹೀಗೆ ತಿರುಮಂಗೈ ಆಳ್ವಾರರ ವಿಗ್ರಹವನ್ನು ಪ್ರತಿಷ್ಠಾಪಿಸಿದ ಪೆರಿಯನಾಟ್ಟಾರ ನಿಂದಲೇ ದೊರೆಯುವಂತಾಗಿ ತಿರುಕುಡವೂರಿನ ಮಹಾಜನಗಳ ಸಮ್ಮತಿಯಂತೆ ಪೆರಿಯನಾಟ್ಟು ವೇಲಾಳನು ಈ ದಾಖಲೆಗೆ ಸಹಿಮಾಡಿದ.

ಒಂದನೇ ಜಟಾವರ್ಮ ಸುಂದರ ಪಾಂಡ್ಯನ ಪ್ರಶಸ್ತಿಯನ್ನು ಸಂಸ್ಕೃತದಲ್ಲಿ ಹೊಂದಿದ ಒಂದೇ ಒಂದು ಪಾಂಡ್ಯರಾಜ ಶಾಸನ ಉಪಲಬ್ಧವಾಗಿದೆ.

ಜಿ.ಟಿ. ೧೭೫ ರಲ್ಲಿ ನೀಡಲಾಗಿರುವ ಅವನ ಪ್ರಶಸ್ತಿಯಂತೆ ಅವನು ಸೋಮಕುಲ ತಿಲಕ. ಮಧುರೆಯ ರಾಜ (ಮಧುರಪುರಿ ಮಾಧವ) ಕೇರಳಿಗರ ಹರ (ಕೇರಳ ವಂಶ ನಿರ್ಮೂಲನ) ಲಂಕಾಪುರದ ನಾಶಕನಾದ (ಲಂಕಾಪುರಿ ಲುಂಠನ ದ್ವಿತೀಯ ರಾಮ) ಎರಡನೇ ಶ್ರೀರಾಮಚಂದ್ರ. ಚೋಳ ಕುಲ ಶೈಲ ಕುಲಿಶ, ಕರ್ನಾಟಕ ರಾಜನನ್ನು ಓಡಿಸಿದವ (ಕರ್ನಾಟರಾಜ ವಿದ್ರಾವಣ) ಹಲವು ಮಂದಿ ಶತ್ರುಗಳ ಕೋಟೆಗಳನ್ನು ನಾಶಮಾಡಿದವ (ವಿವಿಧ ರಿಪು ದುರ್ಗ ಮಥನ) ವೀರಗಂಡಗೋಪಾಲನೆಂಬ ಅರಣ್ಯದ ಬೆಂಕಿ (ವೀರಗಂಡ ಗೋಪಾಲ ವಿಪಿನ ದಾವ ದಹನ) ನಗರ ಶ್ರೇಷ್ಠ ಕಂಚಿಯ ಪ್ರಭು (ಕಾಂಚೀಪುರವರಾಧೀಶ್ವರ) ಗಣಪತಿಯೆಂಬ ಜಿಂಕೆಗೆ ಹುಲಿ ಯಾದವ (ಗಣಪತಿ ಹರಿಣ ಶಾರ್ದೂಲ) ಆಶ್ರಿತ ರಾಜರ ಪ್ರತಿಷ್ಠಾಪಕ (ಪ್ರಣತ ರಾಜ ಪ್ರತಿಷ್ಠಾಧಿಪತಿ) ಅಧಿರಾಜ ಮಹಾರಾಜರ ರಾಜ (ತ್ರಿಭುವನ ಚಕ್ರವರ್ತಿ.) ಹೀಗಾಗಿ ಅವನು ಸುಂದರಪಾಂಡ್ಯಪ್ಪೆರುಮಾಳ್. ಈ ರಾಜನಿಗೆ ಸಂಬಂಧಿಸಿದಂತೆ ತಿರುಮಲೆಯ ಆಲಯದಲ್ಲಿ ಇನ್ನೂ ಹಲವಾರು ಶಾಸನಗಳಿದ್ದರೂ (೧೨೭, ೧೪೦, ೧೬೪, ೧೭೨, ೧೭೫, ೨೩೦, ೨೪೧ ತಿ.ತಿ. ಹಾಗೂ ಜಿ.ಟಿ. ೧೧) ಅವುಗಳಲ್ಲಿ ನಮ್ಮ ಅಗತ್ಯವನ್ನು ಪೂರೈಸುವ ಸಾಮಗ್ರಿಯಿಲ್ಲ.

ಪಾಂಡ್ಯ ಮಾಂಡಳಿಕ ಯಾದವರಾಯರು :— ಈ ಭಾಗದ ತೊಂಡಮಂಡಳವನ್ನು ಮೊದಲಿಗೆ ಚೋಳರ ಮಾಂಡಳಿಕರಾಗಿ ನಂತರ ಪಾಂಡ್ಯರ ಸಾಮಂತರಾಗಿ ನಂತರ ಸ್ವತಂತ್ರ ದೊರೆಗಳಾಗಿ ಆಳಿದ ಯಾದವರಾಯರು ತಿರುಮಲೆಯ ಹಿರಿಯ ಭಕ್ತರಾಗಿದ್ದು, ಆಲಯದ ಪೋಷಕರಾಗಿದ್ದರು. ತಿರುಮಲೆಯ ಆಲಯದೊಡನೆ ಸಂಬಂಧ ಹೊಂದಿದ ಮೊದಲಿಗರಲ್ಲಿ ವೀರನರಸಿಂಹದೇವನು ಪ್ರಪ್ರಥಮ. ಈ ದೊರೆಯು ಆಲಯದಲ್ಲಿ ಪ್ರತಿದಿನ ನೈವೇದ್ಯಕ್ಕಾಗಿ ಅಕ್ಕಿ ತುಪ್ಪಗಳನ್ನು ದೊರಕಿಸಿಕೊಡಲು ಒಂದು ಗ್ರಾಮವನ್ನು ದತ್ತಿ ನೀಡಿದ. (೧೬೪ ತಿ.ತಿ.) ಅವಿಲಾಲದ ಬಳಿಯ ಸ್ವಲ್ಪ ಜಮೀನನ್ನು ತಿರುಕಾಳತ್ತಿದೇವನು ಆಲಯಕ್ಕೆ ನೀಡಿದ (೧೭೦ ತಿ.ತಿ.) ವೀರರಾಕ್ಷಸ ಯಾದವರಾಯನೂ ಸ್ವಲ್ಪ ಜಮೀನನ್ನು ಆಲಯಕ್ಕೆ ನೀಡಿದ (೨೯೩ ತಿ.ತಿ.) ವೀರನರಸಿಂಗನ ರಾಣಿಯು ಎರಡು ನಂದಾದೀಪಗಳ ತುಪ್ಪಕ್ಕಾಗಿ ೬೪ ಹಸುಗಳನ್ನೂ ಎರಡು ಗೂಳಿಗಳನ್ನೂ ನೀಡಿದಳು. (೩೮೧ ತಿ.ತಿ.) ವೀರನರಸಿಂಗನ ಆಳ್ವಿಕೆಯ ನಲವತ್ತನೆಯ ವರ್ಷದಲ್ಲಿ ಇಲ್ಲಿಗೆ ಯಾತ್ರಿಕನಾಗಿ ಬಂದ ತಿರುಪ್ಪುಲ್ಲಾಣಿದಾಸರು ಶ್ರೀ ವೆಂಕಟೇಶ್ವರನ ಆಲಯವನ್ನು ದೊರೆಯ ಅನುಮತಿ ಪಡೆದು ಜೀರ್ಣೋದ್ಧಾರ ಗೊಳಿಸಿದ. ಈ ದೊರೆಯು ತಿರುಮಲೆಯಲ್ಲಿ ತುಲಾಭಾರವನ್ನು ನಡೆಸಿ ವೆಂಕಟಗಿರಿಯನ್ನು ಮೇರುಪರ್ವತವೆನ್ನಿಸಿದ. (೩೭೧ ತಿ.ತಿ.) ಈ ವಂಶದ ಇನ್ನೊಬ್ಬ ರಾಜ ತಿರುವೆಂಕಟನಾಥನು ದೇವರ ಆಡಿ - ತಿರುನಾಳ್ ಮಹೋತ್ಸವ ನಡೆಸಲು ಒಂದು ಗ್ರಾಮವನ್ನು ಸರ್ವಮಾನ್ಯವಾಗಿ ನೀಡಿದ. (೧೮೯ ತಿ.ತಿ.) ಇವನ ಮಾವ ಮಹಾಪ್ರಧಾನಿ ಸಿಂಗಯ ದಣ್ಣಾಯಕನು ಆಲಯದಲ್ಲಿ ಸಿತಕರ ಸಂಧಿಯ ನೈವೇದ್ಯದ ಏರ್ಪಾಡು ಮಾಡಿದ (೧೯೫ ತಿ.ತಿ.) ಈ ಕುಟುಂಬದ ಇನ್ನೊಬ್ಬ ರಾಜ ಶ್ರೀರಂಗನಾಥನ ಆಡಳಿತದ ಮೂರನೇ ವರ್ಷದ ದಾಖಲೆಯು ಬೆಟ್ಟದ ಮೇಲಿನ ಮಠಗಳು, ಹೂದೋಟಗಳನ್ನು ಹೇಳಿ, ಶ್ರೀ ವೆಂಕಟೇಶ್ವರಸ್ವಾಮಿಯ ಪಾರುವೇಟೆ ಉತ್ಸವವನ್ನು ವಿವರಿಸುತ್ತದೆ. ಹದಿನಾರು ವರ್ಷಗಳ ನಂತರದ ಇನ್ನೊಂದು ದಾಖಲೆ; ಲೋಹದ ಮಲ್ಲೈಕುನಿಯ ನಿನ್ರ ಪೆರುಮಾಳ್ ಹಾಗೂ ಅವನ ನಾಯಕಿಯನ್ನು ವಿವರಿಸುತ್ತದೆ. (೧-೧೧೭) ಒಂದು ದಾಖಲೆ ವಸಂತೋತ್ಸವದ್ದು (೧-೧೧೩) ಹೋಬಲಿ ಯಾದವರಾಯನು ದೇವರ ವರದ ಹಸ್ತಕ್ಕೆ ಬಲಗಡೆಯ ಕೆಳಗೈಗೆ - ಒಂದು ಆಭರಣ ನೀಡಿದ.

ಈ ಶಾಸನಗಳಿಂದ ಆಲಯಕ್ಕೆ ನೀಡಲಾದ ದತ್ತಿಗಳ ಬಗ್ಗೆ ಹಲವು ಆಸಕ್ತಿಕರ ವಿವರಗಳು ತಿಳಿದುಬರುತ್ತವೆ.

ತಿ.ತಿ. ೧೬೫ - ರಾಜರು ನೀಡುತ್ತಿದ್ದ ಜಮೀನು ಅಥವಾ ಹಳ್ಳಿಗಳ ದಾನವನ್ನು ವಿವರಿಸುತ್ತದೆ. ಆಲಯದ ಸ್ಥಾನತ್ತಾರರು ಜಮೀನಿನ ಬೇಣಿಗೆಗಾಗಿ ಅಗರಪ್ಪರುವಿನಲ್ಲಿ ಬಿನ್ನಹ ಸಲ್ಲಿಸಿದಾಗ, ಕುಡವೂರು ನಾಡು ಹಾಗೂ ತೊಂಡಪಡಿಪ್ಪರ್ ನಾಡವರು ಅದನ್ನು ಒಪ್ಪಿ ಕೊನೆಗೆ ವರಿಯಮಿಮಾನಾಟ್ಟಿನ್ ಅದನ್ನು ಅನುಮೋದಿಸಿದ ನಂತರ ರಾಜನು ಬಿನ್ನ



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

ಶ್ರೀ ವೆಂಕಟೇಶ ಸುಪ್ರಭಾತ
ವ್ಯಾಖ್ಯಾನ ಸಹಿತ ಬೆಲೆ : 2-50

ಗುರು ಶ್ರೀಶ ವಿಠಲದಾಸರ ಕೃತಿಗಳು
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 6-00

ದಾಸ ತತ್ತ್ವ ಪ್ರಕಾಶಿಕೆ
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 10-00

ಸ್ತೋತ್ರ ಕುಸುಮ ಮಾಲಾ
ಸಂ - ಎಂ. ಎಸ್. ವೆಂಕಟಾಚಲಂ ಬೆಲೆ : 3-00

ತ್ಯಾಗರಾಜ ಸ್ವಾಮಿ ಕೃತಿಗಳ
ಹಲವು ಮುಖಗಳು
-ಎಸ್. ಎಸ್. ಮೂರ್ತಿ ಬೆಲೆ : 5-00

ಭಕ್ತ ಪುರಂದರದಾಸರು
-ಕೆ. ಅಪ್ಪಣ್ಣಾಚಾರ್ಯ ಬೆಲೆ : 2-60

ಕರ್ನಾಟಕ ಹರಿದಾಸರು
ತೆಲುಗು, ಹಿಂದಿ, ಆಂಗ್ಲ, ಕನ್ನಡ ಬೆಲೆ : 2-25

ಶ್ರೀ ಶ್ರೀನಿವಾಸನ ಹಾಡುಗಳು
(ಪ್ರಸನ್ನ ವೆಂಕಟದಾಸರು)
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 7-00

ಶ್ರೀ ಪ್ರಸನ್ನ ವೆಂಕಟದಾಸರು
- ವಿ. ಬಾದರಾಯಣ ಮೂರ್ತಿ ಬೆಲೆ : 0-80

ಶ್ರೀ ಮಹಿಪತಿ ದಾಸರು
- ದ. ನ. ಶಾನಭಾಗ ಬೆಲೆ : 0-85

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ಕೂಡಲೇ ಬರೆಯಿರಿ.

ಸಂಪಾದಕರು
ಪುಸ್ತಕ ಮಾರಾಟ ವಿಭಾಗ,
ಸಪ್ತಗಿರಿ, ತಿ.ತಿ.ದೇ., ತಿರುಪತಿ.



ಹವಲ್ಲಿ ಸೂಚಿಸಿರುವಂತೆಯೇ ದೇಣಿಗೆ ನೀಡಲು ಒಪ್ಪಿ ಯಾದವರಾಯನ ಮೂಲಕ ಸುದ್ದಿ ನೀಡುತ್ತಿದ್ದ. ಈ ಪದ್ಧತಿ ಚೋಳರ ಕಾಲದಲ್ಲಿ - ವಿಶೇಷವಾಗಿ ಮೂರನೇ ರಾಜೇಂದ್ರನ ಕಾಲದಲ್ಲಿ ಜಾರಿಯಲ್ಲಿದ್ದಿತು (೧೨೭ ಜಿ. ಟಿ)

ವಿಜಯನಗರದರಸುಗಳು :-- ಕ್ರಿ.ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯು ದಕ್ಷಿಣಭಾರತದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಒಂದು ಪ್ರಮುಖ ತಿರುವು. ಹದಿನಾಲ್ಕನೇ ಶತಮಾನದ ಮೊದಲ ಮೂರು ದಶಕಗಳಲ್ಲಿ ನಡೆದ ಮುಸಲ್ಮಾನ ಧಾಳಿಗಳಿಂದಾಗಿ ಈ ಭಾಗದ ಆಲಯಗಳು ಹಾಗೂ ದೇವರ ವಿಗ್ರಹಗಳು ಒಂದು ಕಠಿಣವಾದ ಪರಿಸ್ಥಿತಿಯನ್ನೆದುರಿಸಬೇಕಾಯಿತು. ಹೈಂದವ ಸಾಮ್ರಾಜ್ಯ ಇವುಗಳಿಗೆ ಅಗತ್ಯವಿದ್ದ ಎಲ್ಲ ರಕ್ಷಣೆ ಹಾಗೂ ಪೋಷಣೆಗಳನ್ನು ನೀಡಿತು. ತಿರುಮಲೆಯ ಆಲಯವು ಸಾಮ್ರಾಜ್ಯದ ಎಲ್ಲ ರಾಜರ ಭಕ್ತಿಯನ್ನು ಆಕರ್ಷಿಸಿ, ಅಪೂರ್ವವಾದ ಪ್ರಸಿದ್ಧಿಯ ಘಟ್ಟಕ್ಕೇರಿತು.

ಆಲಯದ ಶಾಸನಗಳಲ್ಲಿ ಸುಲಭವಾಗಿ ಗುರುತಿಸಲ್ಪಡುವ ಸಂಗಮ ವಂಶದ ರಾಜನೆಂದರೆ ಎರಡನೇ ಹರಿಹರ. ಪ್ರಭವ ಶಕವರ್ಷ ೧೩೦೯ ರಲ್ಲಿ ತಿ.ತಿ. ೧೦೩ ರಲ್ಲಿ ಹೆಸರಿಸಲ್ಪಟ್ಟ ಹಿರಿಯ. ಆದರೆ ಇವನಿಗೂ ಮೊದಲಿನ ಬುಕ್ಕನ ಶಾಸನಗಳು ಹಲವು ಇವೆ. (೪೮೭, ೨೩೭, ತಿ.ತಿ. ೨೩೮, ಹಾಗೂ ೪೮೫ ತಿ.ತಿ.) ಇವುಗಳಲ್ಲಿ ಯಾವುದರಲ್ಲೂ ರಾಜನ ಹೆಸರು ಸೂಚಿತವಾಗಿಲ್ಲವಾದರೂ, ಜೀರ್ಣಾವಸ್ಥೆಯಲ್ಲಿರುವ ೪೮೭ ತಿ.ತಿ. ಶಾಸನವು ಬುಕ್ಕರಾಯನ್ ಸಂಧಿ ಎಂಬ ಹೆಸರಿನಲ್ಲಿ ಸಂಧಿಕಾಲದ ನೈವೇದ್ಯಕ್ಕಾಗಿ ಒಂದು ಗ್ರಾಮದ ದೇಣಿಗೆಯನ್ನು ತಿಳಿಸುತ್ತದೆ. ತಿ.ತಿ. ೪೪ ರಲ್ಲಿ ಇದೇ ಬುಕ್ಕರಾಯನ ಸಂಧಿ ನೈವೇದ್ಯವನ್ನು ಶಕ ೧೩೭೬ ರಲ್ಲಿ ಉಲ್ಲೇಖಿಸಲಾಗಿದೆ.

ಆಲಯದ ವಿಮಾನಶಿಖರದಲ್ಲಿ ಒಂದು ಚಿನ್ನದ ಕಳಶವನ್ನು ಪ್ರಮುಖ ಮಾಂಡಲಿಕನಾದ ಮಹಾಮಂಡಲೇಶ್ವರ ಮಂಗಿದೇವನು ಕ್ರಿ.ಶ. ೧೩೭೬ ರಲ್ಲಿ ಸ್ಥಾಪಿಸಿದ (೨೩೭ ತಿ.ತಿ.) ಗರ್ಭಗೃಹವನ್ನು ಗಿಲೀಟು ಮಾಡಿಸಿದ. ಕಂಪಣನ ಒಬ್ಬ ಮಂತ್ರಿಯು ಆಲಯಕ್ಕೆ ೨೮ ಹಸು ಹಾಗೂ ಒಂದು ಗೂಳಿಯನ್ನು ನೀಡಿದ. (೩೭೩, ೪೮೫ ತಿ.ತಿ.) ಕ್ರಿ.ಶ. ೧೩೮೮ ರಲ್ಲಿ ಅಂದು ರಾಜ್ಯವಾಳುತ್ತಿದ್ದ ಹರಿಹರರಾಯನ ಹೆಸರಿನಲ್ಲಿ ಮುಲ್ಲೈ ತಿರುವೆಂಕಟ ಜೆಯರು ಮಾಸಿ ತಿರುನಾಳ್ ಉತ್ಸವವನ್ನೇರ್ಪಡಿಸಿದರು (೧೦೩ ತಿ.ತಿ.) ಕ್ರಿ.ಶ. ೧೩೯೦ ರ ಒಂದು ದಾಖಲೆ ಉತ್ಸವ ಮೂರ್ತಿಗಳ ಮುಂದೆ ಪಾಶುರಗಳನ್ನು ಹಾಡುವ ತಿರುಪ್ಪಾವೈ ಉತ್ಸವವನ್ನು ವಿವರಿಸುತ್ತದೆ. ಮೂರು ವರ್ಷಗಳ ನಂತರದ ಒಂದು ಶಾಸನ ಪ್ರತಿ ಉತ್ಸವದ ವಿದಯ್ಯರಿ ದಿನವನ್ನು ಕುರಿತು ಹೇಳುತ್ತದೆ (೧೪೩ ತಿ.ತಿ.). ಕ್ರಿ.ಶ. ೧೪೦೪ ರ ಒಂದು ಶಾಸನ ಕೋಡೈ ತಿರುನಾಳನ್ನು ಕುರಿತು ಹೇಳುತ್ತದೆ (೩೪೦ ತಿ.ತಿ.).

ಎರಡನೇ ಹರಿಹರನ ಒಂದು ಶಾಸನ (ತಿ.ತಿ. ೧೦೩) ಶ್ರೀ ವೆಂಕಟೇಶ್ವರಸ್ವಾಮಿಗೆ ತನ್ನ ಹೆಸರಿನಲ್ಲಿ ಉತ್ಸವವೊಂದರ ವ್ಯವಸ್ಥೆಯನ್ನು ವಿವರಿಸಿ ಅದರ ಏರ್ಪಾಡಿಗೆ ಪುನಗುಂದ ಗ್ರಾಮದ ಆದಾಯವಾದ ನೂರು ಪಣಂ ಅನ್ನು ಶ್ರೀನಿವಾಸ ಮಠದ ಅಧಿಕಾರಿಯು ನೀಡಬೇಕೆಂದು ತಿಳಿಸುತ್ತದೆ. ಮಠದ ಅಧಿಕಾರಿಗೆ ಗ್ರಾಮವನ್ನು ಒಪ್ಪಿಸಿರಬೇಕೆಂದು ತೋರುತ್ತದೆ. ಈ ಮಠದ ಧಾರ್ಮಿಕ ಪ್ರಭಾವಕ್ಕೆ ವಿಜಯನಗರದ ಅರಸರ ಮೊದಲ ವಂಶ ನಿಧಾನವಾಗಿ ಒಳಗಾಗಿ, ಈ ದೇವಾಲಯದಲ್ಲಿ ವೇದಪಾರಾಯಣವು ಎರಡನೇ ದೇವರಾಯನ ಕಾಲದಲ್ಲಿ ಮೊದಲಿಯರ್ ತಿರುಕ್ಕಲಿಕನ್ರಿದಾಸರ್, ಅಳಗಪ್ಪಿರನಾರ್ ಅವರ ಪ್ರಯತ್ನದಿಂದಾಗಿ ಉಂಟಾಯಿತು. ಜೊತೆಗೇ ಮಂಟಪ, ಗೋಪುರಗಳ ನಿರ್ಮಾಣವೂ ಆಯಿತು. ಇದರೊಡನೆಯೇ ಅನ್ನಸತ್ರಗಳು, ತುಳಸೀತೋಟಗಳೂ, ಹೆಚ್ಚಾಗಿ, ಉತ್ಸವಗಳು ಹೆಚ್ಚಾಗಿ ಅವುಗಳ ನಿರ್ವಹಣೆಗಾಗಿ ಗ್ರಾಮಗಳ ಮಾನ್ಯಗಳೂ ಕಂದಾಡೈ ರಾಮಾನುಜ ಅಯ್ಯಂಗಾರ್ಯನ ಪ್ರಭಾವದಿಂದ ಸಾಳುವ ನರಸಿಂಹನು ನೀಡುವಂತಾಯಿತು.

ಎರಡನೇ ದೇವರಾಯನು ಅರೆಡಜನ್ ಶಾಸನಗಳಲ್ಲಿ ಪ್ರತಿನಿಧಿಸಲ್ಪಟ್ಟಿದ್ದಾನೆ. ಶಕ ೧೩೫೧ ರ ಸೌಮ್ಯ ನಾಮಸಂವತ್ಸರದಲ್ಲಿ (೫-೧೨-೧೪೨೯) ಆಲಯದ ನಿತ್ಯನಿವೇದನಕ್ಕಾಗಿ ಈತ ಮೂರು ಹಳ್ಳಿಗಳನ್ನು ಮಾನ್ಯನೀಡಿ, ೧೨೦೦ ಪೊನ್‌ಗಳನ್ನೂ ನೀಡಿದ (೧೮೮ ತಿ.ತಿ.) ಶಕ ೧೩೫೫ ರ ಪ್ರಮಾದೀಚ ನಾಮಸಂವತ್ಸರದಲ್ಲಿ ದೇವಣ್ಣ ಒಡೆಯರ ಶಿಫಾರಸ್ಸಿನಂತೆ ಸಿದ್ಧಕುಟ್ಟೈ ಅಥವಾ ಶ್ರೀನಿವಾಸಪುರದ ರಾಜಾದಾಯದ ಅರ್ಧಭಾಗವನ್ನು (ವರ್ಷಕ್ಕೆ ಪ್ರಾಯಶಃ ೨೦೦ ಪೊನ್ ಆದಾಯದ್ದು) ಆಲಯದ ಶ್ರೀ ಭಂಡಾರಕ್ಕೆ ಮೊದಲೇ ಸೇರಿದ್ದ ಉಳಿದ ಅರ್ಧಭಾಗದಂತೆಯೇ ಸೇರಿಸಿ ಆ ವರ್ಷ ಪುನಃ ನವೀಕೃತವಾದ ೨೪ ವೇದಪಾರಾಯಣದಾರ ಬ್ರಾಹ್ಮಣರಿಗೆ ಇನಾಮು ನೀಡಿದ. (೮೯, ೧೯೪ ತಿ.ತಿ.) ಈ ಹಳ್ಳಿ ಕೊತ್ತಲಸ್ಥಳದಲ್ಲಿ ವೈಕುಂಡ - ವಲನಾಡುಗಳ ಉಪವಿಭಾಗವಾಗಿರಬೇಕು. ಕೊಟ್ಟಂ ಹೆಸರನ್ನು ಹೇಳದಿದ್ದರೂ, ವೈಕುಂಡವಲನಾಡು ಮತ್ತು ತಿರುಕ್ಕುಡವೂರುಗಳೆರಡೂ ಚಂದ್ರಗಿರಿ ರಾಜ್ಯದ ತಿರುವೆಂಕಟ ಕೋಟ್ಟಂ ಜಿಲ್ಲೆಯದೆಂದು ತಿಳಿಯುವುದು.

ದೇವಣ್ಣ ಒಡೆಯರಲ್ಲದೆ ಎರಡನೇ ದೇವರಾಯನ ಇನ್ನೊಬ್ಬ ಅಧಿಕಾರಿ ಮಲ್ಲಣ್ಣನೂ ಶಕ ೧೩೩೦ ರ ಸರ್ವಧಾರಿ (೧೩-೩-೧೪೦೯) ಸಂವತ್ಸರದ ಶಾಸನದಲ್ಲಿ ಉಲ್ಲೇಖಿತನಾಗಿದ್ದಾನೆ. ಈತನು ಮೊದಲಿಗೆ ಮೈಸೂರು ಪ್ರಾಂತ್ಯದ ಆಡಳಿತಾಧಿಕಾರಿಯಾಗಿ ಕೆಲಸನಿರ್ವಹಿಸಲು ಕಳುಹಿಸಲ್ಪಟ್ಟು ನಂತರ ಚಂದ್ರಗಿರಿಯ ರಾಜಪಾಲನಾದ. ಮೇಲೆ ಹೇಳಿದ ಶಕ ೧೩೩೦ ಪ್ರಾಯಶಃ ಆತ ಚಂದ್ರಗಿರಿ ರಾಜ್ಯದ ಆಡಳಿತಭಾರವನ್ನು ಆತ ಸ್ವೀಕರಿಸಿದ ವರ್ಷವಾಗಿರಬೇಕು. ಈತ ಶ್ರೀ ವೆಂಕಟೇಶ್ವರಸ್ವಾಮಿಗೆ ನೈವೇದ್ಯ ಹಾಗೂ ನಿತ್ಯದೀಪದ ಏರ್ಪಾಡು ಮಾಡಿದ.

ಆತನ ಹೆಸರು ಮೂಡಿಬರುವ ನಂತರದ ಶಾಸನವೆಂದರೆ ಶಕವರ್ಷ ೧೩೩೯ ರ ಹೇವಿಳಂಬಿ ಸಂವತ್ಸರ (೨೫-೮-೧೪೧೭) (೮೮ ತಿ.ತಿ.) ಈ ಬಾರಿ ಆತ ಮಧ್ಯದೇವಾಲಯದ ಮುಂದಿರುವ ತಿರುಮಾಮಣಿ ಮಂಟಪ ನಿರ್ಮಾಣವನ್ನು ತಳದಿಂದ ಮೇಲುಚಾವಣಿಯವರೆಗೆ ಪೂರ್ತಿಗೊಳಿಸಿ, ಪ್ರಾಯಶಃ ಆನಂದ ನಿಲಯ (ಗರ್ಭಗುಡಿಯ ಮೇಲಿನ) ವಿಮಾನದ ಜೀರ್ಣೋದ್ಧಾರ ಮಾಡಿರಬೇಕು. (೨೩೫ ತಿ.ತಿ.) ಆತನ ಅತಿ ಈಚಿನ ಶಾಸನವೆಂದರೆ ಶಕ ೧೩೬೬ ರ ರಕ್ತಾಕ್ಷಿ ಸಂವತ್ಸರದ್ದು (೨-೧೦-೧೪೪೪) (೬೪ ತಿ.ತಿ.) ಇದು ಎರಡನೇ ದೇವರಾಯನ ಆಳ್ವಿಕೆಯ ಕೊನೆಯ ಐದಾರು ವರ್ಷಗಳ ಮೊದಲಿಗೆ ನಮ್ಮನ್ನು ಕರೆದೊಯ್ಯುತ್ತದೆ. ಪ್ರಾಯಶಃ ಕ್ರಿ. ಶ. ೧೩೪೭ ವರ್ಷದಲ್ಲಿ ಇರಗಪ್ಪ ಒಡೆಯನ ಉತ್ತರಾಧಿಕಾರಕ್ಕೆ ವರ್ಗಾಯಿತನಾಗಿರಬೇಕು.

೯೨ ತಿ.ತಿ. ಶಾಸನ ಸಂಸ್ಕೃತ ಶಾರ್ದೂಲ ವಿಕ್ರೀಡಿತ ವೃತ್ತದ ಪದ್ಯವಾಗಿದ್ದು, ಆತನನ್ನು ಅಮಾತ್ಯ ಶೇಖರ ಎಂದು ಕರೆದಿದೆ. ಈ ಪದವಿ ವಿಜಯನಗರದ ರಾಜಪ್ರತಿನಿಧಿಗಳು, ರಾಜ್ಯಪಾಲರು, ಮಂತ್ರಿಗಳ ಪದವಿಗೆ ಸಮಾನವಾಗಿದ್ದು, ಶಕ ೧೩೦೯ ರ ವೇಳೆಗೇ ಎರಡನೇ ಹರಿಹರನ ಕಾಲದಲ್ಲಿಯೇ ಮಲ್ಲಣನು ಈ ಪದದಿಂದ ಸನ್ಮಾನಿತನಾಗಿರಬೇಕು. ಆತನ ಬಗೆಗಿನ ದೀರ್ಘ ಅವಧಿಯ ಕಾಲಾಂತರವುಳ್ಳ ಶಾಸನಗಳಲ್ಲೆಲ್ಲ ಆತ ಚಂದ್ರಗಿರಿವಾಸಿ ಎಂದು ಗುರುತಿಸಲಾಗಿರುವುದರಿಂದ ಚಂದ್ರಗಿರಿ ರಾಜ್ಯವನ್ನು ಆತ ಶಕವರ್ಷ ೧೩೩೦ ರಿಂದ ೧೩೬೬ ರವರೆಗೆ ಪಾಲಿಸಿದನೆಂದು ತೀರ್ಮಾನಿಸಬಹುದು. ಆದರೆ ಶಕವರ್ಷ ೧೩೩೫ ರಲ್ಲಿ ಆತ ಚಂದ್ರಗಿರಿ ರಾಜ್ಯವನ್ನಾಳುತ್ತಿದ್ದನೋ ಅಥವಾ ಸಾದಲಿಯ ರಾಜ್ಯವನ್ನಾಳುತ್ತಿದ್ದನೋ ಎಂಬುದು ತಿಳಿದುಬರುವುದಿಲ್ಲ.

ಮಲ್ಲಣನು ದೇವರಸರ ಮಗ ಹಾಗೂ ಗೋಪೀನಾಥಯ್ಯನ ಶಿಷ್ಯ. ತನ್ನ ಗುರುವಿನ ಹೆಸರು ಹೇಳುವುದು ಹಾಗೂ ಶ್ರೀ ಮಾಧವದಾಸ ಎಂಬ ಅಂಕಿತವನ್ನು ಬಳಸಿರುವುದು ಆತ ಅತಿ ಹೆಚ್ಚಿನ ಧಾರ್ಮಿಕ ಶ್ರದ್ಧೆ ಹೊಂದಿದ್ದವನಾಗಿದ್ದ ಎಂಬುದನ್ನು ಸೂಚಿಸುತ್ತದೆ.

ಸಾಳುವರ ಕಾಲದ ತಿರುಮಲೆ :-- ಎರಡನೇ ದೇವರಾಯನ ಕಾಲದಲ್ಲಿಯೇ ಸಾಳುವರು ಪ್ರಭಾವಶಾಲಿಗಳಾಗಿ ಬೆಳೆಯುತ್ತಿದ್ದರೆಂದು ತಿಳಿದುಬರುತ್ತದೆ. ಶಕವರ್ಷ ೧೩೬೮ ರ ಕ್ಷಯನಾಮಸಂವತ್ಸರದಲ್ಲಿ (೧೦-೧೦-೧೪೪೬) ಎಲ್ರ ಕಂಪಯರಾಯನ ಮಗ ಸಾಳುವ ಪೆರಿ ಮಲ್ಲಯದೇವ ಮಹಾರಾಜನು ೧೩. ತಿ.ತಿ. ಶಾಸನದಲ್ಲಿ ಕಂಡುಬರುತ್ತಾನೆ.

ಶಕವರ್ಷ ೧೩೬೪ ರ ದುಂಧುಭಿ ಸಂವತ್ಸರದಲ್ಲಿ ಮುದ್ದಿಯ ನಾಯಕನ ಮಗ ತುಪ್ಪದ ನಾಗಯ್ಯ ನಾಯಕರು ದೇವರಿಗೆ ೩೦೦೦ ಹೊನ್ನಿನ ಕಾಣಿಕೆ ನೀಡಿದನೆಂದು ತಿಳಿದುಬರುತ್ತದೆ. (೧೦೦ ತಿ.ತಿ.) ಈತ ಪ್ರಾಯಶಃ ಚಂದ್ರಗಿರಿಯಲ್ಲಿ ನೆಲೆಯಾದ ಎರಡನೇ ದೇವರಾಯನ ಸೇನಾಪತಿಗಳಲ್ಲಿ ಒಬ್ಬನಾಗಿದ್ದಿರಬೇಕು.

ಶಕವರ್ಷ ೧೩೫೨ ರ ಸಾಧಾರಣ ಸಂವತ್ಸರದಲ್ಲಿ (೧-೭-೧೪೩೦) ಒಂದು ಚಿನ್ನದ ಪಟ್ಟವನ್ನು ದೇವರಿಗೆ ನೀಡಿದ ಗುರುತುಗಳು ನಯನಗಳು - (೨) ರಾಮ - (೩) ಚಂದ್ರ - (೧) ಈತ ಎರಡನೇ ದೇವರಾಯನ (ಗಜವೇಂಟೆಗಾರ) ತಮ್ಮನಾದ ಈತ ಶಕವರ್ಷ ೧೩೪೬ ರಲ್ಲಿ ಆರ್ಕಾಟು ಜಿಲ್ಲೆಯ ಮರಕತನಗರ ಪ್ರಾಂತದ ಆಡಳಿತಗಾರನಾಗಿರಬೇಕು.

ಮಲ್ಲಿಕಾರ್ಜುನನ ಬಗ್ಗೆ ಒಂದೇ ಒಂದು ದಿನಾಂಕ ದೊರೆಯುತ್ತದೆ. ಅದು ಶಕ ವರ್ಷ ೧೩೭೨ ರ ಶುಕ್ಲ ವರ್ಷದ್ದಾಗಿ (೪-೩-೧೪೫೦) ಇದು ಅವನ ಆಳ್ವಿಕೆಯ ಎರಡನೇ ವರ್ಷದ್ದು. ಚಂದ್ರಗಿರಿಯಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣ ನಿಯೋಗಿ ರಾಜಮಾಣಿಕ್ಕು ಚೆನ್ನಪ್ಪ ಒಡೆಯರ್‌ಗೆ ತಿರುಪತಿಯ ಶ್ರೀ ವೈಷ್ಣವರಿಬ್ಬರು ಮನೆ ಹಾಗೂ ಮನೆಯ ಮುಂದಿನ ಸ್ಥಳವನ್ನು ಮಾರಿದ ವಿವರವನ್ನು ನೀಡುತ್ತದೆ. ಬಹುಶಃ ಈ ಚೆನ್ನಪ್ಪ ಒಡೆಯರೇ ವಿಶೇಷದಿನಗಳಲ್ಲಿ ರಾಜನಿಗೆ ಹಾಗೂ ಮನ್ನೆಯವರಿಗೆ ಹೂವನ್ನು ನೀಡುವವನಾಗಿರಬೇಕು.

ತಿರುಪತಿ ಚಂದ್ರಗಿರಿಗಳು ಹತ್ತು ಮೈಲಿ ಮಾತ್ರವೇ ದೂರವಿದ್ದು, ಈ ಶಾಸನದಲ್ಲಿರುವಂತೆ ತಿರುವೆಂಕಟಕೋಟ, ತಿರುಪತಿ - ತಿರುಕ್ಕುಡವೂರು ಎಂತಲೂ, ಚಂದ್ರಗಿರಿ ವೈಕುಂಠವಲನಾಡು ಎಂತಲೂ ಎರಡು ಉಪವಿಭಾಗಗಳಾಗಿದ್ದವು.

ಸಾಳುವ ವಂಶದವರಿಂದಾದ ಶಾಸನಗಳಿಂದ ಆಲಯದ ಬಗ್ಗೆ ಕೆಳಗಿನಂತೆ ವಿವರಗಳು ತಿಳಿದುಬರುತ್ತವೆ - (ಮೊದಲು ಬರುವುದು ಶಾಸನಸಂಖ್ಯೆ)

೩. ತಿ.ತಿ. - ಒಂದು ಗ್ರಾಮದ ಸ್ವರ್ಣಾದಾಯ ತೆರಿಗೆಯ ದೇಣಿಗೆಯಿಂದ ಸಾಳುವ ನರಸಿಂಹನ ಹೆಸರಿನಲ್ಲಿ ಒಂದು ಸಂಧಿಯನ್ನುಂಟುಮಾಡಲಾಯಿತು.

೩೬೧ ತಿ.ತಿ. - ಪ್ರತಿ ಶನಿವಾರವೂ ಒಂದು ದೀಪವನ್ನು ಹಚ್ಚಲು ಕ್ರಿ.ಶ. ೧೪೬೧ರಲ್ಲಿ ದಾನಿಗಳೊಬ್ಬರು ಏರ್ಪಾಡು ಮಾಡಿದರು.

೧೫೭ ತಿ.ತಿ. - ಕ್ರಿ.ಶ. ೧೪೬೮ ರ ಒಂದು ಶಾಸನದಲ್ಲಿ ತಿರುಪವಿತ್ರ ತಿರುನಾಳ್ ಅಥವಾ ಪವಿತ್ರೋತ್ಸವ ಹೆಸರಿಸಲ್ಪಟ್ಟಿದೆ.

೬೬ ತಿ.ತಿ. ಕ್ರಿ.ಶ. ೧೪೬೮ ರ ಈ ಶಾಸನದಲ್ಲಿ ಸಾಳುವ ನರಸಿಂಹನು ಒಂದು ಗೋಪುರವನ್ನು ಕಟ್ಟಿಸಿದನೆಂದೂ, ಅದರ ಬಳಿಯ ಸತ್ರದಲ್ಲಿ ಯಾತ್ರಿಕರಿಗೆ ಅನ್ನದಾನದ ವ್ಯವಸ್ಥೆಯನ್ನುಂಟು ಮಾಡಿದನೆಂದೂ ಹೇಳಲಾಗಿದೆ.

೭೦ ತಿ.ತಿ. ಅದರ ನಂತರದ ವರ್ಷದ ಈ ಶಾಸನದಲ್ಲಿ ದಿನವೂ ತೋಮಾಲಸೇವೆಯ ಆರಂಭದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಪಾದವನ್ನು ತೊಳೆದ ಮೇಲೆ ಸ್ವಾಮಿಯ ನಿವೇದನೆಗೆಂದು ದಧ್ಯೋದನ ಸಂಧಿಯನ್ನು ಏರ್ಪಡಿಸಿದ್ದಾಗಿಯೂ, ಪಂಗುಣಿ ಅಮಾವಾಸ್ಯೆ ಹಾಗೂ ವಸಂತ ಪೂರ್ಣಿಮೆಗಳಲ್ಲಿ ನೃಸಿಂಹದೇವರಿಗೆ ತಿರುಮಂಜನ ಮಾಡುವ ಪದ್ಧತಿಯನ್ನು ಆರಂಭಿಸಲಾಯಿತು ಎಂದಿದೆ.

೧೯೭ ತಿ.ತಿ. ಈ ಶಾಸನದಂತೆ ಪುರಟ್ಟಾಶಿ ತಿರುನಾಳಿನ ಉತ್ಸವದ ಹತ್ತುದಿನಗಳಲ್ಲಿಯೂ ನರಸಿಂಹಸ್ವಾಮಿ ಕೋನೇರಿಯ ದಡದಲ್ಲಿ ಸತ್ರವನ್ನು ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.

೧೯೮ ತಿ.ತಿ. ಈ ಶಾಸನವೂ ಸಾಳುವ ನರಸಿಂಹನಿಂದ ಏರ್ಪಾಡಾದ ಡೋಲೋತ್ಸವ ಅಥವಾ ಅನ್ನಾ ಊಂಜಲ್ ತಿರುನಾಳ್ ಬಗ್ಗೆ ಹೇಳುತ್ತದೆ. ಇದರ ಕಾಲ ಕ್ರಿ.ಶ. ೧೪೭೩.

೨೦೦ ತಿ.ತಿ. ಕ್ರಿ.ಶ. ೧೪೭೬ ರ ದಾಖಲೆಯಿದು. ಮಲೈಕುನಿಯ ನಿನ್ರ ಪೆರುಮಾಳರು ಪಂಗುಣಿ ಹಾಗು ಪುರಟ್ಟಾಶಿ ಉತ್ಸವಗಳಲ್ಲಿ ರಥವನ್ನೇರಲು ವರಾಹಸ್ವಾಮಿ ಆಲಯದ ಮಂಟಪಕ್ಕೆ ಬರುತ್ತಿದ್ದರೆಂದೂ, ಕನುಪ್ಪಡಿಯ ವೇಳೆಗೆ ಅರಿಷಿಣದಿಂದ ಲೇಪಿತಳಾದ ತಾಯಾರಿಗೆ ತಿರುಮಂಜನ ನಡೆಯುತ್ತಿದ್ದಿತೆಂದೂ ತಿಳಿಸುತ್ತದೆ.

೫೦ ತಿ.ತಿ. ಕ್ರಿ.ಶ. ೧೪೭೭ ರ ಈ ದಾಖಲೆಯಿಂದ ಅಲಮೇಲು ಮಂಗೈ ಸಂಧಿ ಎಂಬ ಹೊಸ ನೈವೇದ್ಯ ಸಂಧಿ ಏರ್ಪಟ್ಟಿತೆಂದು ತಿಳಿದುಬರುತ್ತದೆ.

೫೨ ತಿ.ತಿ. ಈ ಜೀರ್ಣಶೀರ್ಣವಾದ ದಾಖಲೆ ಪಾಪನಾಶನಂ ಉತ್ಸವದ ಬಗ್ಗೆ ಹೇಳುತ್ತದೆ.

೬೪೮ ತಿ.ತಿ. ಕ್ರಿ.ಶ. ೧೪೭೨ ರಲ್ಲಿ ನರಸಿಂಹರಾಯನು ಉತ್ಥಾನ ದ್ವಾದಶಿಯಂದು ಒಂದು ಗ್ರಾಮವನ್ನು ವೇಣಿಗೆ ನೀಡಿದನೆಂದು ದಾಖಲಿಸುತ್ತದೆ. ಇವರ ಆದಾಯವನ್ನು ತಿರುಮಲೆ ತಿರುಪತಿಗಳಲ್ಲೂ ತಿರುಮಲೆಯ ನರಸಿಂಹರಾಯ ಮಂಟಪದಲ್ಲಿಯೂ ಗೋಪುರಗಳನ್ನು ನಿರ್ಮಿಸಲು ಬಳಸಬೇಕೆಂದು ಕಟ್ಟಳೆ ಮಾಡಿದ.

೧೯೩ ತಿ.ತಿ. ಮಾರ್ಗಳಿ ತಿಂಗಳ ಧನುರ್ಮಾಸ ಉತ್ಸವವಾದ ತಿರುಪ್ಪಳ್ಳಿಯೆಳುಚ್ಚಿಯನ್ನು ಕ್ರಿ.ಶ. ೧೪೮೬ ರ ಈ ಶಾಸನ ವಿವರಿಸುತ್ತದೆ.

೫೬೪ ಈ ಶಾಸನವು ಉತ್ಥಾನದ್ವಾದಶಿಯಂದು ಹಾಗೂ ಶ್ರೀ ಜಯಂತಿಯಂದು ಪುರವೀಧಿಗಳಲ್ಲಿ ಮೆರವಣಿಗೆ ಹೊರಟದ್ದನ್ನು ಹೇಳುತ್ತದೆ.

೨೫೦ ತಿ.ತಿ. ಕ್ರಿ.ಶ. ೧೪೯೧ ರ ಈ ಶಾಸನವು ಯುಗಾದಿ ದೀಪಾವಳಿಗಳಂದು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸೂರ್ಯ, ಚಂದ್ರರಂತೆ ಕಂಡು ಬರುವ ಹಾರಗಳಿಂದ ಅಲಂಕರಿಸುತ್ತಿದ್ದುದನ್ನು ತಿಳಿಸುತ್ತದೆ.

೨೫೩ ತಿ.ತಿ. ಕ್ರಿ.ಶ. ೧೪೯೧ ರ ಈ ಶಾಸನವು ಮಾರ್ಗಳಿ ಮಾಸದಲ್ಲಿ ತಿರುವಧ್ಯಯನದ ಮೊದಲ ದಿನದಂದು ಆಕಾಶಗಂಗೆಗೆ ಹೋಗುವ ಮಾರ್ಗವನ್ನು ಮರಮ್ಮತ್ತು ಗೊಳಿಸುತ್ತಿದ್ದ ಬಗ್ಗೆ ತಿಳಿಸುತ್ತದೆ.

೨೮೩ ತಿ.ತಿ. ಇದೇ ವರ್ಷದ ಈ ದಾಖಲೆ ಮಲೈಕುನಿಯನಿನ್ರ ಪೆರುಮಾಳರು ತಾಯಾರರೊಡನೆ ಅಶ್ವವಾಹನದಲ್ಲಿ ಎಂಟು ಉತ್ಸವ ದಿನಗಳಲ್ಲಿ ಮೆರವಣಿಗೆ ಹೊರಡುವರೆಂದು ತಿಳಿಸುತ್ತದೆ.

೨೮೦ ತಿ.ತಿ. ಎರಡು ವರ್ಷಗಳ ನಂತರದ ಈ ಶಾಸನವು ಶ್ರೀಜಯಂತಿ, ಶ್ರೀರಾಮನವಮಿ, ವಸಂತ ಪಂಚಮಿ ಹಬ್ಬಗಳನ್ನು ವಿವರಿಸುತ್ತದೆ.

೬೧೫ ತಿ.ತಿ. ಇದೇ ವರ್ಷದಲ್ಲಿ ಆನಂದಪಿಳ್ಳೈ ಮಂಟಪವನ್ನು ಕುಮಾರರಾಜ ಪೆರಿಯ ತಿಮ್ಮರಾಜನ ಪತ್ನಿ ನರಸಮ್ಮನು ಪುನರ್ನಿರ್ಮಾಣಗೊಳಿಸಿದ ದಾಖಲೆಯಿದು.

೩೩೭ ತಿ.ತಿ. ಕ್ರಿ.ಶ. ೧೪೯೩ ರ ದಾಖಲೆ. ಇಲ್ಲಿ ಮಾರ್ಗಳಿ ತಿಂಗಳಿನಲ್ಲಿ ನಡೆಯುತ್ತಿದ್ದ ತಿರುವಧ್ಯಯನ ಉತ್ಸವ ವಿವರಿತ.

೩೦೭ ತಿ.ತಿ. ಇದೇ ವರ್ಷದ ಈ ದಾಖಲೆಯಲ್ಲಿ ತಿರುಕ್ಕೋಡಿ ತಿರುನಾಳ್‌ನಲ್ಲಿ ರಥೋತ್ಸವ ನಡೆಯುತ್ತಿದ್ದಿತೆಂದು ತಿಳಿಸಲಾಗಿದೆ.

೩೧೩ ತಿ.ತಿ. ಕ್ರಿ.ಶ. ೧೪೯೪ ರ ದಾಖಲೆ. ಇಲ್ಲಿ ಅಲ್ಪಸಿ ತಿರುನಾಳ್ ಉತ್ಸವ ನಡೆಯುತ್ತಿದ್ದ ಪದ್ಧತಿಯಿದ್ದಿತೆಂದು ವಿವರಣೆಯಿದೆ.

೬೧೭ ತಿ.ತಿ. ಆದಿ ಆಯನಂ ಉತ್ಸವವನ್ನು ಹೆಸರಿಸುವ ಈ ದಾಖಲೆಯು ಚಾತುರ್ಮಾಸದಲ್ಲಿನ ಉತ್ತರ ಏಕಾದಶೀ ದಿನದಂದು ಕಾಳಿಕಾಪುರಾಣವನ್ನು ಕೇಳುತ್ತಿದ್ದರೆಂದು ವಿವರಿತ.

೬೨೮ ತಿ.ತಿ. ಕ್ರಿ.ಶ. ೧೪೯೫ ರ ಈ ಶಾಸನವು ಆಲಯದ ಆಭರಣ ಕೋಶದಲ್ಲಿನ ಆಭರಣಗಳು ವಂಶಪಾರಂಪರ್ಯವಾಗಿ ಹೊಣೆಯಲ್ಲಿರಬೇಕೆಂದೂ, ಕಂದಾಡೆ ರಾಮಾನುಜ ಅಯ್ಯಂಗಾರ್ಯನು ಆಭರಣಗಳಿಗೆ ಆಗಬೇಕಿದ್ದ ಅಗತ್ಯವಾದ ರಿಪೇರಿ ಕೆಲಸಗಳನ್ನೂ ಮಾಡಿಸಬೇಕೆಂದು ನರಸಿಂಹರಾಯನು ಆಜ್ಞೆ ನೀಡಿದ್ದನ್ನು ವಿವರಿಸುತ್ತದೆ.

೬೩೬ ತಿ.ತಿ. ಮಾರನೇ ವರ್ಷದ ಈ ದಾಖಲೆಯು ನವಲೂರು ಮಂಟಪಕ್ಕೆ ಮೆರವಣಿಗೆ ಹೊರಟದ್ದನ್ನು ವಿವರಿಸಿ, ಆಲಯ ಸೇವಾಕರ್ತರಾದ ತಿರುಪ್ಪಾಣಿ ಪಿಳ್ಳೈ ಲಚ್ಚಿ ನಾಯಕರು, ಪ್ರಬಂಧವಾಚಕರು, ಕನಿಗಪ್ಪನ್, ವಾಹನ ಹೊರುವವರು, ಅಧಿಕಾರಿ, ಪಕ್ಷಾಧಿಕಾರಿ, ದೀಪ ಹಿಡಿಯುವವರು, ಬಿನ್ನಹಗಾರರು, ಕಟ್ಟಿಗೆ ತರುವವರು, ಪರಾಕು ಭಟರು, ನಾಟ್ಯಾಚಾರ್ಯ, ಕಾಲಕರ್ತ, ನರ್ತಕರು, ವಾದ್ಯಗಾರರು, ಮೇಳಗಾರರು, ಕುಂಬಾರರು, ಗಾಯಕರು, ಶಿಲ್ಪಿಗಳು, ಸಂರಕ್ಷಕರುಗಳನ್ನು ಹೆಸರಿಸುತ್ತದೆ.

೩೩೬ ತಿ.ತಿ. ಇದು ೧೪೯೬ ರ ದಾಖಲೆಯಾಗಿದ್ದು ಶ್ರೀ ವೆಂಕಟೇಶ್ವರಸ್ವಾಮಿಗೆ ಹಾಗೂ ಅಲಮೇಲುಮಂಗೈ ತಾಯಾರಿಗೆ ಪುನುಗುಕಾಪ್ಪುವನ್ನು ಒಂದು ಬಿಟ್ಟೊಂದು ಶುಕ್ರವಾರ ಹಚ್ಚುವ ಪುನುಗು ಕಾಪ್ಪು ಮುರೈಯನ್ನು ವಿವರಿಸುತ್ತದೆ.

೨೭೧ ತಿ.ತಿ. ಕ್ರಿ.ಶ. ೧೫೦೪ ರ ಈ ಶಾಸನವು ಸಂಪಕಚುರ್ಳುವಿನಲ್ಲಿನ ರಾಯರ್ ಮಂಟಪವನ್ನು ಕುರಿತು ಹೇಳುತ್ತದೆ.

ಮುಂದಿನ ತಿಂಗಳ

ಅರವೀಡು ವಂಶದವರ ಕಾ



# ಶ್ರೀಕೃಷ್ಣ ಜನನ

---ಕಂದಾಡೈ ಕೇಶವನ್.

ಪರಮಾತ್ಮನು ಧರ್ಮ ಗ್ಲಾನಿಯಾದಾಗ ಲೋಕ ಕಲ್ಯಾಣಕ್ಕಾಗಿ ತಾನೇ ಅವತಾರ ಮಾಡುತ್ತಾನೆ. ಶ್ರೀ ಕೃಷ್ಣಾವತಾರ ವಿಷ್ಣುವಿನ ಎಂಟನೆಯ ಅವತಾರ. ಲೀಲಾ ಭೂಮಿಕೆಯಲ್ಲಿ ಪರಮಾತ್ಮನು ತಾನೇ ಅವತಾರ ಮಾಡಿ ಜನ ಸಾಮಾನ್ಯರ ಮಧ್ಯೆ ತನ್ನ ದೈವೀ ಶಕ್ತಿಯನ್ನು ತೋರಿ ಸೃಷ್ಟಿಯ ಸಮಷ್ಟಿ ವಿಕಾಸಕ್ಕಾಗಿ ಕೃಷ್ಣನಾಗಿ ಧರೆಗಿಳಿದನು ಭಗವಂತ. ಕೃಷ್ಣಾವತಾರದ ಹಿನ್ನೆಲೆ ಭಾಗವತ. ಹರಿವಂಶ. ಮಹಾಭಾರತ, ವಿಷ್ಣುಪುರಾಣ. ಪದ್ಮಪುರಾಣ, ಬ್ರಹ್ಮಪುರಾಣ, ವಾಯುಪುರಾಣ, ಬ್ರಹ್ಮವೈವರ್ತಕ ಪುರಾಣ, ಸ್ಕಾಂದಪುರಾಣ, ವಾಮನ ಪುರಾಣ ಮತ್ತು ಕೂರ್ಮ ಪುರಾಣಗಳಲ್ಲಿ ನಾವು ಕಾಣಬಹುದು. ಕೃಷ್ಣಾವತಾರ ಪೂರ್ಣಾವತಾರವೆಂದೇ ಎಲ್ಲರ ಅಭಿಪ್ರಾಯ. ಶ್ರೀಕೃಷ್ಣಚರಿತೆ ಸಮಸ್ತ ಹಿಂದುಗಳಿಗೂ ಪಾಶ್ಚಾತ್ಯ ದೇಶದವರಿಗೂ ಆದರಣೀಯವಾಗಿದೆ. ಕೃಷ್ಣನ ಉಪಾಸನೆ ಸರ್ವವ್ಯಾಪಕವಾಗಿದೆ. ಶ್ರೀಕೃಷ್ಣನ ಅವತಾರ ರಹಸ್ಯವನ್ನು ತಿಳಿಯದೇಕಾದರೆ ಶ್ರೀಮದ್ಭಾಗವತ ದಶಮಸ್ಕಂದದ ಮೊದಲನೆಯ ಅಧ್ಯಾಯದಲ್ಲಿ. ಯಮುನಾ ನದಿಯ ದಂಡೆಯ ಮೇಲೆ ಮಧುರಾ ರಾಜ್ಯವಿದೆ. ಅಲ್ಲಿನ ಅರಸ ಉಗ್ರಸೇನ, ಉಗ್ರಸೇನನ ಮಗ ಕಂಸ. ಇನ್ನೊಬ್ಬ ಮಗ ದೇವಕ. ದೇವಕನ ಮಗಳು ದೇವಕಿ. ವಸುದೇವನು ದೇವಕಿಯನ್ನು ಮದುವೆಯಾಗಿ ಗೃಹ ಪ್ರವೇಶ ಸಮಯ, ಮಧೂವರರ ಮೆರವಣಿಗೆ ಅಲಂಕಾರದ ರಥ ಸಿದ್ಧವಾಯಿತು. ಉಗ್ರಸೇನನ ಮಗ ಕಂಸ ತಾನೇ ರಥಕ್ಕೆ ಸಾರಥಿಯಾದ ದೇವಕಿ ವಸುದೇವರ ಮೆರವಣಿಗೆ ಹೊರಟಿತ್ತು. ಸ್ವಲ್ಪ ದೂರ ರಥವು ನಡೆದ ಮೇಲೆ ಆಕಾಶವಾಣಿ ಕೇಳಿಬಂತು

ಅಸ್ಯಾಸ್ತ್ವಾಂ ಅಷ್ಟಮೋ ಗರ್ಭೋ
ಹಂತಾ ಯಾಂ ವಹಸೇಽಬುಧ

ಎಲೈ ಕಂಸನೇ ನೀನು ಎಂತಹ ಮೂರ್ಖನು. ಈ ಸಂಭ್ರಮ ಸಾಕು. ನಿನ್ನ ಈ ತಂಗಿಯ ಎಂಟನೆಯ ಗರ್ಭದಲ್ಲಿ ಹುಟ್ಟುವ ಶಿಶುವು ನಿನಗೆ ಮೃತ್ಯುವಾಗುತ್ತದೆ. ಇದನ್ನು ನೆನಪಿನಲ್ಲಿಡು. ಎಂಬುವುದಾಗಿ ಹೇಳಿತು. ಆಕಾಶವಾಣಿಯನ್ನು ಕೇಳಿ ಕುಪಿತನಾದ ಕಂಸ ತಂಗಿಯನ್ನು ವಧಿಸಲು ಕತ್ತಿ ಎತ್ತಿದನು. ಆಗ ಮಹಾಭಾಗನಾದ ವಸುದೇವನು ಕಂಸನನ್ನು ಪರಿ ಪರಿಯಾಗಿ ಸಮಾಧಾನ ಮಾಡಿ ನಿರ್ದೋಷಿಯಾದ ದೇವಕಿಯನ್ನು ಕೊಲ್ಲುವುದು ಉಚಿತವಲ್ಲ. ದೇವಕಿಯ ಹೊಟ್ಟೆಯಲ್ಲಿ ಹುಟ್ಟುವ ಎಂಟನೆಯ ಮಗುವು ಮೃತ್ಯುವೆಂದು ಭಾವಿಸುವುದಾದರೆ ದೇವಕಿಯ ಗರ್ಭದಲ್ಲಿ ಹುಟ್ಟುವ ಮಕ್ಕಳನ್ನು ಒಪ್ಪಿಸುವೆನೆಂದು ಭಾಷೆಕೊಟ್ಟನು. ಕಂಸನು ಅದಕ್ಕೆ ಒಪ್ಪಿ ಅವರಿಬ್ಬರನ್ನು ಸೆರೆಮನೆಯಲ್ಲಿ ಕೂಡಿಹಾಕಿದನು. ಕಶ್ಯಪ ಅದಿತಿಯರು ವರುಣನ ಶಾಪದಿಂದ ಯದುವಂಶದಲ್ಲಿ ವಸುದೇವ ದೇವಕಿಯರಾಗಿ ಹುಟ್ಟಿದರು. ಸಮುದ್ರರಾಜನ ಮಕ್ಕಳು ಗೋಪಾಲರಾಗಿ ಹುಟ್ಟಿದರು. ಅಪ್ಸರಾಸ್ತ್ರೀಯರು ಗೋಪಿಯರಾದರು.

ವೇದ ಉಪನಿಷತ್ತುಗಳು ಗೋವೃಂದವಾಗಿ ಜನಿಸಿದವು. ಕಂಸನು ಹಿಂದಿನ ಜನ್ಮದಲ್ಲಿ ಕಾಲನೇಮಿಯೆಂಬ ರಾಕ್ಷಸನಾಗಿದ್ದನು. ಮಹಾವಿಷ್ಣುವು ತನ್ನನ್ನು ಮುಂದೆ ಕೊಲ್ಲುವನು ಎಂಬುವ ಅಂಶವನ್ನು ಆಕಾಶವಾಣಿಯಿಂದ ತಿಳಿದ ಕಂಸನು ನಾರದರ ಮುಖಾಂತರವೂ ಇದನ್ನು ಖಚಿತ ಪಡಿಸಿಕೊಂಡನು, ದುಷ್ಟನಾದ ಕಂಸನು ಯಾದವರನ್ನೂ ಭೋಜವಂಶದವರನ್ನೂ ದೇವತಾಂಶ ಸಂಭೂತರೆಂದು ಭಾವಿಸಿ ಅವರನ್ನೆಲ್ಲಾ ದ್ವೇಷಿಸತೊಡಗಿದನು. ದೇವಕಿ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳನ್ನೆಲ್ಲಾ ಕೊಂದನು. ದೇವಕಿಯ ಏಳನೆಯ ಗರ್ಭವನ್ನು ವಸುದೇವನ ಮತ್ತೊಬ್ಬ ಹೆಂಡತಿ ರೋಹಿಣಿಯಲ್ಲಿ ಒಂದು ದೈವೀಶಕ್ತಿ ಕೊಂಡೊಯ್ದು ಇಡಲು ಅಲ್ಲಿ ಬಲರಾಮನ ಜನನ ವಾಯಿತು. ಇತ್ತ ದೇವಕಿ ಎಂಟನೆಯ ಸಾರಿ ಗರ್ಭವತಿಯಾದಳು. ದೇವಕಿಯ ಸುತ್ತ ತೇಜೋವಲಯ ಏರ್ಪಟ್ಟಿತು. ತಂಗಿಯ ಬಳಿ ದಿವ್ಯವಾದ ಕಾಂತಿಯನ್ನು ಕಂಡ ಕಂಸ ಕಂಗಾಲನಾದ. ಕಂಸನಿಗೆ ಕುಳಿತಾಗಲೂ, ಮಲಗಿದಾಗಲೂ ನಿಂತಾಗಲೂ ಶ್ರೀಹರಿಯು ತನ್ನನ್ನು ಕೊಲ್ಲಲು ಬರುವನೆಂಬ ಭಯ ಆವರಿಸಿತು. ಶ್ರೀ ವ್ಯಾಸರು ಈ ಘಟ್ಟವನ್ನು ಪ್ರಪಂಚವೇ ಹೃಷೀಕೇಶ ಮಯವಾಗಿತ್ತು ಕಂಸನ ಪಾಲಿಗೆ ಎಂಬುವುದಾಗಿ ಹೇಳುವಾಗ--

"ಚಿಂತಯಾನೋ ಹೃಷೀಕೇಶಂ
ಅಪಶ್ಯತ್ ತನ್ಮಯಂ ಜಗತ್"

ಎಂಬುವುದಾಗಿ ವರ್ಣಿಸಿದ್ದಾರೆ. ಈ ಲೇಖನವು ಶ್ರೀಕೃಷ್ಣನ ಜನನವನ್ನು ಪುರಾಣ ಇತಿಹಾಸಗಳು, ಕವಿಗಳು ಹೇಗೆ ಕೊಂಡಾಡಿದ್ದಾರೆ ಎಂಬುವುದನ್ನು ಮಾತ್ರ ವಿವರಿಸುತ್ತದೆ. ಬ್ರಹ್ಮರುದ್ರ ನಾರದಾದಿ ಮಹರ್ಷಿಗಳು ದೇವಕಿಯ ಗರ್ಭದಲ್ಲಿ ಶ್ರೀಹರಿಯು ಆವಿರ್ಭಾವವಾಗಿ ದಿವ್ಯಕಾಂತಿಯಿಂದ ಬೆಳೆಯುತ್ತಿದ್ದಾನೆಂದು ತಿಳಿದು ಅವರು ಕಂಸನ ಸೆರೆಮನೆಗೆ ಬಂದು ಭಗವಂತನನ್ನು ಈ ಪರಿಯಾಗಿ ಸ್ತೋತ್ರ ಮಾಡುತ್ತಾರೆ.

*****************************



*****************************

"ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ
ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ
ಸತ್ಯಸ್ಯ ಸತ್ಯಮುತ ಸತ್ಯನೇತ್ರಂ
ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ

ಪ್ರಭು ನೀನು ಹಿಂದೆ ಪ್ರತಿಜ್ಞೆ ಮಾಡಿದಂತೆ ದೇವಕಿ ಗರ್ಭವನ್ನು ಪ್ರವೇಶಿಸಿ ನಿಶ್ಚಯವಾಗಿ ಸತ್ಯವ್ರತನಾಗಿರುವೆ. ಸತ್ಯನಿಷ್ಠೆಯು ನಿನ್ನ ಪ್ರಾಪ್ತಿಗೆ ಸುಲಭ ಸಾಧನ ಮಾರ್ಗ. ಭೂತ ಭವಿಷ್ಯತ್ ವರ್ತಮಾನಗಳೆಂಬ ತ್ರಿಕಾಲಕ್ಕೂ ನೀನು ಇರುವೆ. ಪಂಚಭೂತಗಳಿಗೂ ನೀನು ಕಾರಣಭೂತನು. ಅವುಗಳ ಅಂತರ್ಯಾಮಿಯೂ ಕೂಡ ನೀನೇ. ಜಗತ್ತಿನ ಆದಿ ಮಧ್ಯ ಅಂತ್ಯಗಳಿಗೂ ನೀನೇ ಕಾರಣನು. ಸತ್ಯ ವಚನಕ್ಕೆ ಸಮದೃಷ್ಟಿಗೆ ನೀನು ಪ್ರೇರಕನು. ನಿನಗೆ ಶರಣು"

ತ್ವಂ ಪಾಸಿ ನಸ್ತ್ರಿ ಭುವನಂ ಚ
ಯಥಾ ಧುನೇಶ
ಭಾರಂ ಭುವೋಹರ
ಯಧೂತ್ತಮ ವಂದನಂ ತೇ

ಶ್ರೀಹರಿಯೇ ಹಿಂದೆ ನೀನು ಮತ್ಸ್ಯ ಕೂರ್ಮಾದಿ ಅವತಾರಗಳನ್ನು ಮಾಡಿ ನಮ್ಮನ್ನೂ ಮತ್ತು ಜಗತ್ತನ್ನೂ ಹೇಗೆ ರಕ್ಷಿಸಿದೆಯೋ ಹಾಗೆಯೇ ಈಗಲೂ ಯದುವಂಶದಲ್ಲಿ ಅವತರಿಸಿ ಭೂಭಾರವನ್ನು ಇಳಿಸು ನಿನಗೆ ಸಹಸ್ರ ಪ್ರಣಾಮಗಳು; ಶ್ರೀಕೃಷ್ಣನ ಜನನವನ್ನು ಭಾಗವತವು--

ಅಥ ಸರ್ವಗುಣೋಪೇತಃ
ಕಾಲಃ ಪರಮಶೋಭನಃ
ಯರ್ಹ್ಯೇವಾ ಜನ ಜನರ್ಕ್ಷಂ
ಶಾಂತರ್ಕ್ಷ ಗ್ರಹತಾರಕಂ ||೧||

ದಿಶಃ ಪ್ರಸೇದುರ್ಗಗನಂ
ನಿರ್ಮಲೋಡು ಗಣೋದಯಂ
ಮಹೀ ಮಂಗಲ ಭೂಯಿಷ್ಠ
ಪುರಗ್ರಾಮ ವ್ರಜಾಕರಾ ||೨||

ನದ್ಯಃ ಪ್ರಸನ್ನಸಲಿಲಾ
ಹ್ರದಾ ಜಲರುಹ ಶ್ರೀಯಃ
ದ್ವಿಜಾಲಿ ಕುಲಸಂನಾದಸ್ತಬಕಾ
ವನರಾಜಯಃ ||೩||

ನಿಶೀಥೇ ತಮ ಉದ್ಭೂತೇ
ಜಾಯಮಾನೇ ಜನಾರ್ದನೇ
ದೇವಕ್ಯಾಂ ದೇವರೂಪಿಣ್ಯಾಂ
ವಿಷ್ಣುಃ ಸರ್ವ ಗುಹಾಶಯಃ
ಆವಿರಾಸೀದ್ಯಥಾ ಪ್ರಾಚ್ಯಾಂ
ದಿಶೀನ್ದುರಿವ ಪುಷ್ಕಲಃ ||೪||

ಸಮಸ್ತ ಗುಣಗಳಿಂದ ಕೂಡಿದ ಅತ್ಯಂತ ಶೋಭಾಯಮಾನವಾದ ಶುಭ ಸಮಯವು ಒದಗಿಬಂತು. ಆದಿನ ಬ್ರಹ್ಮದೇವಾತಾತ್ಮಕವಾದ ರೋಹಿಣೀ ನಕ್ಷತ್ರವು ದಿಗ್ ದಿಗಂತದಲ್ಲಿ ಗ್ರಹನಕ್ಷತ್ರ ತಾರೆಗಳು ಶಾಂತವಾಗಿದ್ದವು. ಸ್ವಚ್ಛವಾದ ದಿಕ್ಕುಗಳು ಜಗಜಗಿಸುವ ತಾರೆಗಳು ಗಗನದಲ್ಲಿ, ಎಲ್ಲೆಲ್ಲೂ ಮಂಗಳಕರ ವಾತಾವರಣ ಪ್ರಸನ್ನವಾದ ತಿಳಿನೀರಿನ ನದಿಗಳು, ಸರೋವರಗಳಲ್ಲಿ ವಿಕಸಿತವಾದ ಕಮಲ ಕೆನ್ನೈದಿಲೆಗಳು ಗೊಂಚಲುಗಳಿಂದ ರಾರಾಜಿಸುವ ಫಲಪುಷ್ಪಗಳಿಂದ ಕೂಡಿದ ವೃಕ್ಷಸಮೂಹಗಳು. ಪಕ್ಷಿಗಳು ಚಿಲಿಪಿಲಿಗುಟ್ಟುತ್ತಿರಲು, ದುಂಬಿಗಳು ಝೇಂಕರಿಸುತ್ತಿರಲು, ಸುಖಕರನಾದ ವಾಯುವು ಮಂದಮಂದವಾಗಿ ಬೀಸುತ್ತಿರಲು, ಲೋಕವೆಲ್ಲಾ ಸುವಾಸನೆಯಿಂದ ಕೂಡಿರಲು, ಅಂತಹ ಸಮಯದಲ್ಲಿ ಎಲ್ಲರ ಹೃದಯ ಕಮಲಗಳಲ್ಲಿ ವಿರಾಜಿಸುವ ಹೃಷೀಕೇಶನು ಪೂರ್ವದಿಕ್ಕಿನಲ್ಲಿ ಹದಿನಾರು ಕಳೆಗಳಿಂದ ಕೂಡಿದ ಪೂರ್ಣ ಚಂದ್ರನು ಉದಯಿಸುವಂತೆ ದೇವಕೀದೇವಿಯ ಗರ್ಭದಲ್ಲಿ ಪ್ರಾದುರ್ಭವಿಸಿದನು. ಆ ಕೃಷ್ಣನ ರೂಪವನ್ನು ವರ್ಣಿಸುವಾಗ ವ್ಯಾಸರು--

"ತಮದ್ಭುತಂ ಬಾಲಕಂ ಅಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುದಾಯುಧಮ್



ಶ್ರೀ ವತ್ಸಲಕ್ಷ್ಮಂ ಗಲ ಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರ ಪಯೋದ ಸೌಭಗಮ್
ಮಹಾರ್ಹ ವೈಡೂರ್ಯ ಕಿರೀಟ ಕುಂಡಲ
ತ್ವಿಷಾ ಪರಿಷ್ವಕ್ತ ಸಹಸ್ರ ಕುಂತಲಂ
ಉದ್ದಾಮ ಕಾಂಚ್ಯಂಗದ ಕಂಕಣಾದಿಭಿಃ
ವಿರೋಚಮಾನಂ ವಸುದೇವ ಐಕ್ಷತ"

ವಸುದೇವನು ಅದ್ಭುತರೂಪಿಯಾದ ಬಾಲಕೃಷ್ಣನನ್ನು ಕಂಡನು. ಆತನ ಕಣ್ಣುಗಳು ಕಮಲದಂತೆ ವಿಶಾಲವಾಗಿ ಕೋಮಲವಾಗಿ ಇದ್ದವು. ಬಾಲಕನು ತನ್ನ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿದ್ದನು.

ವಕ್ಷಸ್ಥಳದಲ್ಲಿ ಸುಂದರವಾದ ಶ್ರೀವತ್ಸದ ಮಚ್ಚೆ, ಕತ್ತಿನಲ್ಲಿ ಕೌಸ್ತುಭಮಣಿ ಪ್ರಕಾಶಿಸುತ್ತಿತ್ತು. ವರ್ಷಾಕಾಲದ ನೀಲಮೇಘಕ್ಕೆ ಸಮಾನವಾದ ಶ್ಯಾಮಲವರ್ಣದಿಂದ ಕಂಗೊಳಿಸುವ ಸುಂದರ ಶರೀರಕ್ಕೆ ಒಪ್ಪುವ ಪೀತಾಂಬರ, ವೈಡೂರ್ಯ ಮಣಿ ಖಚಿತವಾದ ಕಿರೀಟದ ಸೊಬಗು, ಕೂದಲಿಗೆ ಒಪ್ಪುವ ಕರ್ಣಕುಂಡಲಿ, ನಡುವಿನಲ್ಲಿ ಒಡ್ಯಾಣ, ಕೈಗಳಲ್ಲಿ ಸುವರ್ಣದ ಕೇಯೂರ ತೋಳ್ಬಳೆಗಳು, ಕಾಲಿನಲ್ಲಿ ಕಂಗೊಳಿಸುವ ಕಾಲ್ಬಳೆಗಳು. ಎಂತಹ ಅಮಿತ ಆನಂದವೀವ ಕಮನೀಯ ಕಿಶೋರಮೂರ್ತಿ. ಭಗವಂತ ಸಾಮಾನ್ಯ ಬಾಲಕನಾಗಿ ಹುಟ್ಟಿರಲಿಲ್ಲ. ಅಪ್ರಾಕೃತ ಶರೀರದಿಂದ ಹುಟ್ಟಿದ್ದನು.

ಹರಿವಂಶದಲ್ಲಿ : ಜಯಂತೀ ಎಂಬ ರಾತ್ರಿಯ ಅಭಿಜಿತ್ ನಕ್ಷತ್ರದಲ್ಲಿ ಅಷ್ಟಮಿಯ ರಾತ್ರಿಯ ಕೊನೆಯ ಯಾಮದಲ್ಲಿ ವಿಜಯನಾಮಕ ಮುಹೂರ್ತದಲ್ಲಿ ಅನಂತ ಕೋಟಿ ಬ್ರಹ್ಮಾಂಡ ನಾಯಕನೂ, ಚರಾಚರ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ ಕರ್ತನೂ ಆದ ಜನಾರ್ದನನು ದೇವಕೀ ಗರ್ಭದಿಂದ ಆವಿರ್ಭೂತನಾದನು. ಆಗ ಆಕಾಶದಲ್ಲಿ ದೇವ ದುಂದುಬಿಗಳು ಮೊಳಗಿದವು. ದೇವತೆಗಳು ಸಂತೋಷದಿಂದ ಹೂಮಳೆಗರದರು. ಮಹರ್ಷಿಗಳು ವೇದ ಮಂತ್ರಗಳಿಂದ ಸ್ತುತಿಸಿದರು. ವಸುದೇವನಾದರೋ ಶಂಖಚಕ್ರಾದಿ ಆಯುಧಗಳಿಂದ ಜನಿಸಿದ ಜನಾರ್ಧನನ್ನು ಭಗವಂತನೆಂದೇ ತಿಳಿದನು.

ವಸುದೇವಸ್ತ ತಂ ದೃಷ್ಟ್ವಾ
ಜಾತಂ ಪುತ್ರಮಧೋಕ್ಷಜಂ
ಶ್ರೀವತ್ಸ ಲಕ್ಷಣಂ
ದೃಷ್ಟ್ವಾವಯುತಂ ದಿವ್ಯೈಶ್ಚಲಕ್ಷಣೈಃ

ವಿಷ್ಣು ಪುರಾಣದಲ್ಲಿ : ಶ್ರೀಕೃಷ್ಣನ ಜನನ ಇನ್ನೂ ಸುಂದರ. ಶ್ರೀಹರಿಯು ತ್ರಿಲೋಕಗಳಿಗೆ ಉಪಕಾರ ಮಾಡಲು ದೇವಕಿಯ ಗರ್ಭವನ್ನು ಪ್ರವೇಶಿಸಿದನು.

"ತತೋ ಗ್ರಹಗಣಃ
ಸಮ್ಯಕ್ ಪ್ರಚಚಾರ ದಿವಿ ದ್ವಿಜ
ವಿಷ್ಣೋರಂಶೇ ಭುವಂ ಯಾತೇ
ಋತವಶ್ಚಾ ಬಭುಶ್ಶುಭಾಃ"

ವಿಷ್ಣುವಿನ ಅಂಶ ಭೂಲೋಕಕ್ಕೆ ಬರಲಾಗಿ ಆಕಾಶದಲ್ಲಿ ಎಲ್ಲ ಗ್ರಹಗಳು ಚಲಿಸಿದವು, ಋತುಗಳೆಲ್ಲಾ ಶುಭಕರವಾಗಿ ಶೋಭಿಸಿದವು. ದೇವಕಿಯ ಮುಖದಲ್ಲಿ ಪ್ರಖರವಾದ ತೇಜಸ್ಸು ಹೊಳೆಯುತ್ತಿತ್ತು.

"ತತೋ ಅಖಿಲ ಜಗತ್
ಪದ್ಮಬೋಧಾಯಾಚ್ಯುತಭಾನುನಾ

ದೇವಕೀ ಪೂರ್ವ ಸಂಧ್ಯಾಯಾಂ
ಆವಿರ್ಭೂತಂ ಮಹಾತ್ಮನಾ
ತಜ್ಜನ್ಮದಿನ ಮತ್ಯರ್ಥ
ಮಾಹ್ಲಾದ್ಯಮಲ ದಿಂಗ್ ಮುಖಂ
ಬಭೂವ ಸರ್ವಲೋಕಸ್ಯ
ಕೌಮುದೀ ಶಶಿನೋಯಥಾ"

ಜನಾರ್ಧನನು ಜನಿಸುವಾಗ ಜಗತ್ತೇ ಪ್ರಸನ್ನವಾಗಿತ್ತು. ಜಗತ್ತೆಂಬ ಪದ್ಮವನ್ನು ಅರಳಿಸಲು ಮಹಾತ್ಮನಾದ ಅಚ್ಯುತನೆಂಬ ಸೂರ್ಯನು ದೇವಕಿಯೆಂಬ ಪ್ರಾತಃ ಸಂಧ್ಯೆಯಲ್ಲಿ ಉದಿಸಿದನು. ಸ್ವಚ್ಛವಾದ ಆಕಾಶವು ಚಂದ್ರನ ಬೆಳದಿಂಗಳಿಂದ ಕಂಗೊಳಿಸಿ ಆಹ್ಲಾದಕರವಾಗಿತ್ತು ಇತ್ಯಾದಿ.

ಶ್ರೀಪಾದ್ಮಪುರಾಣದ ಉತ್ತರಖಂಡದಲ್ಲಿ ಶ್ರೀಕೃಷ್ಣ ಜನನ ಕುರಿತು--

ಕೃಷ್ಣಾಷ್ಟಮ್ಯಾಂ ತು ರೋಹಿಣ್ಯಾಂ
ಪ್ರೋಷ್ಠ ಪದ್ಯಾಂ ಶುಭೋದಯೇ
ರೋಹಿಣೀ ಜನಯಾ ಮಾಸ
ಪುತ್ರಂ ಸಂಕರ್ಷಣಂ ಪ್ರಭುಂ
ದೇವಕ್ಯಾಂ ಗರ್ಭಮಾಪೇದೇ
ಭಗವಾನೀಶ್ವರೋ ಹರಿಃ
ಆಸನ್ನ ಗರ್ಭಾಂ ತಾಂ ದೃಷ್ಟ್ವಾ.
ಕಂಸೋಪಿ ಭಯಪೀಡಿತಃ
ತತಸ್ತು ದಶಮೇ ಮಾಸೀನಭೇ
ಬ್ರಹ್ಮರ್ಷ ಸಂಯುತೇ
ಅಷ್ಟಮ್ಯಾಂ ಅರ್ಧರಾತ್ರೇ ಚ
ತಸ್ಯಾಂ ಜಾತೋ ಜನಾರ್ದನಃ
ನೀಲೋತ್ಪಲ ದಳ ಶ್ಯಾಮಃ
ಪದ್ಮಪತ್ರ ನಿಭೇಕ್ಷಣಃ
ಚತುರ್ಭುಜಃ ಸುಂದರಾಂಗೋ
ದಿವ್ಯಾಭರಣ ಭೂಷಿತಃ
ಶ್ರೀವತ್ಸ ಕೌಸ್ತುಭೋರಸ್ಕೋ
ವನ ಮಾಲಾ ವಿಭೂಷಿತಃ
ವಸುದೇವಸ್ಯ ಜಾತೋ ಸೌ
ವಾಸುದೇವಃ ಸನಾತನಃ

ವೈಷ್ಣವೀ ಮಾಯೆಯಾದ ಯೋಗನಿದ್ರೆಯು ಕೃಷ್ಣಾಷ್ಟಮಿಯಾ ದಿನ ರೋಹಿಣೀ ನಕ್ಷತ್ರ ದಿವಸವೇ ದೇವಕೀ ಗರ್ಭದಿಂದ ವಸುದೇವನ ದೇರೊಬ್ಬ ಭಾರ್ಯೆ ರೋಹಿಣೀಯಲ್ಲಿ ಸಂಕರ್ಷಣನನ್ನು ಸೆಳೆದು ತಂದು ಇರಿಸಿದಳು. ಅನಂತರ ಭಗವಾನ್ ಹರಿಯೇ ದೇವಕಿ ಗರ್ಭದಿಂದ ಅವತರಿಸಿದನು. ವರ್ಷಾಕಾಲ, ಶ್ರಾವಣಮಾಸ ಕೃಷ್ಣಪಕ್ಷ ಅಷ್ಟಮಿಯ ಸರಿರಾತ್ರಿ ಜನಾರ್ದನು ಜನಿಸಿದನು. ನೀಲೋತ್ಪಲ ದಳ ಶ್ಯಾಮನಾಗಿ, ಪದ್ಮಪತ್ರನಿಭೇಕ್ಷಣನಾಗಿ, ಚತುರ್ಭುಜನಾಗಿ, ದಿವ್ಯಾಭರಣ ಭೂಷಿತನಾಗಿ, ಸುಂದರನಾಗಿ, ಶ್ರೀವತ್ಸ ಕೌಸ್ತುಭ ವನಮಾಲೆಗಳಿಂದ ವಿಭೂಷಿತನಾಗಿ ಅವತಾರಮಾಡಿದನು.

ಕೇರಳದ ಮಹಾಕವಿ ಮೆಪ್ಪತ್ತೂರು ನಾರಾಯಣ ಭಟ್ಟಾದಿರಿ ಅವರ ಅಮರ ಕಾವ್ಯ ನಾರಾಯಣೀಯಮ್ ಎಂಬುವ ಭಕ್ತಿಯುತವಾದ ೩೮ ನೆಯ ದಶಕದಲ್ಲಿ ಶ್ರೀಕೃಷ್ಣಾವತಾರವರ್ಣನೆ ರಮ್ಯವಾಗಿದೆ. ಕವಿ ಕೃಷ್ಣನನ್ನು ಕುರಿತು ಆನಂದರೂಪ ಭಗವಂತನಾದ ಪ್ರಭುವೇ ನಿನ್ನ ಅವತಾರ ಸಮಯದಲ್ಲಿ ವರ್ಷಋತು ಆರಂಭವಾಗಿ ಮೋಡಗಳು ಆಕಾಶದಲ್ಲಿ ಹರಡಿ ನಿನ್ನ ಮಂಗಳ ವಿಗ್ರಹದ ಅಂಗದಿಂದ ಚಿಮ್ಮಿದ ಕಾಂತಿ ಪುಂಜಗಳೋ ಎಂಬಂತೆ ಅಮಿತ ಶೋಭೆಯಿಂದ ಪ್ರಕಾಶಿಸಿದವು.

ಆನಂದರೂಪ ಭಗವನ್ನಯಿ ತೇಽವತಾರೇ
ಪ್ರಾಪ್ತೇ ಪ್ರದೀಪ್ತ ಭವದಂಗ ನಿರೀಯಮಾಣೈಃ
ಕಾಂತಿವ್ರಜೈರಿವ ಘನಾಘನ ಮಂಡಲೈರ್ದ್ಯಾ
ವಾ ವೃಣ್ವತೀ ವಿರರುಚೇ ಕಿಲ ವರ್ಷವೇಲಾ

ಮಳೆಯ ಪ್ರಭಾವದಿಂದ ಭುವಿಯ ಸಮಸ್ತ ದಿಕ್ಕುಗಳೂ ಶೀತಲವಾಗಿರಲು, ಸಜ್ಜನರು ತಮ್ಮ ಆಸೆಗಳು ಪೂರ್ಣಹೊಂದುವಂತೆ ಆನಂದದಿಂದಿರಲು, ಮಧ್ಯರಾತ್ರಿ ಚಂದ್ರನು ಉದಯವಾಗುವ ಸಮಯ ಮೂರು ಲೋಕಗಳ ಕ್ಲೇಶವನ್ನು ದೂರಮಾಡಲು ಶ್ರೀಕೃಷ್ಣನು (ನೀನು) ಭೂಮಿಯ ಮೇಲೆ ಅವತಾರ ಮಾಡಿರುವಿ ಎಂಬುವುದಾಗಿ ನಾರಾಯಣ ಭಟ್ಟಾದ್ರಿ ಹೇಳುತ್ತಾರೆ. ಶ್ರೀಕೃಷ್ಣನು ಅವತಾರ ಪುರುಷನೆಂದೇ ತಿಳಿಯಲು ವಸುದೇವ ದೇವಕಿಯರಿಗೆ ಶಂಖ ಚಕ್ರ ಕಿರೀಟ ಗದೆ ಪದ್ಮಗಳನ್ನು ನಾಲ್ಕು ಕೈಯ್ಯಗಳಲ್ಲಿ ಹಿಡಿದು ಮೇಘಶ್ಯಾಮನು ಪ್ರಸೂತಿ ಗೃಹದಲ್ಲಿ ಪ್ರಕಾಶಿಸಿದನು. ಈ ಶಿಶು ಸಾಮಾನ್ಯಶಿಶುವಲ್ಲ ಎಂಬುವುದಾಗಿ ಬಟ್ಟಾದ್ರಿಗಳು ತಮ್ಮ ನಾರಾಯಣೀಯಂನಲ್ಲಿ ವರ್ಣಿಸುವಾಗ ಭಕ್ತಿಯಿಂದ--

ಬಾಲ್ಯಸ್ವಸಾಕಪಿ ವಪುಷಾ ದಧುಷಾವಿಭೂತೀ
ರುದ್ಯತ್ ಕಿರೀಟ ಕಟಕಾಂಗದ ಹಾರ ಭಾಸಾ
ಶಂಖಾರಿವಾರಿ ಜಗದಾ ಪರಿಬಾಸಿತೇನ
ಮೇಘಾಸಿತೇನ ಪರಿಲೇಪಿಥ ಸೂತಿಗೃಹೇ

ಶ್ರೀ ಪು.ತಿ. ನರಸಿಂಹಾಚಾರ್ಯರ ಶ್ರೀಹರಿ ಚರಿತೆಯಲ್ಲಿ ನಂದನಂದನನ ಆನಂದಕಂದನ ಜನನ ವರ್ಣನೆಗೆ ಅತೀತ. ನೀಲ ಮೇಘಶ್ಯಾಮನ ಅವತಾರಕ್ಕೆ ನಿಶಾಕಾಂತನ ಆಹ್ಲಾದ ಚಾತುರ್ಯಮಂ ಹಿಮಂತನ ಸಂಗದೊಳು ರವಿ ಕಲಿಯುತಿರೆ ಎಂಬುವ ವಿನೂತನ ಕಲ್ಪನೆಯಿಂದ ಬಣ್ಣಿಸಿದ್ದಾರೆ.

ಧಾರುಣಿ ಪೀತಾಂಬರವನ್ನು ಧರಿಸಿದ್ದಾಳೆ. ಹೊಲ ತುಂಬಿದೆ ಗದ್ದೆನಾಚಿದೆ. ರಜನಿ ಉಜ್ವಲ ತಾರಾಭರಣೆ, ಪ್ರಕೃತಿಯ ನೀಲ ನೀಲ ಪರಿಸರ, ರಮ್ಯ ಸುಂದರ ಗೋಕುಲದಲ್ಲಿ ಗೋಪಾಲನ ಜನನ ತ್ರಾಣಕ್ಕೆ ಲೋಕ ಕಲ್ಯಾಣ. ಅದು ಜಗದ ಪುಣ್ಯ ಎಂದು ವರ್ಣಿಸಿದ್ದಾರೆ. ಕವಿ ಪುತಿನ ವಸುದೇವನು ಶ್ರೀಕೃಷ್ಣನನ್ನು ಕಂಡ ಬಗೆಯನ್ನು ವರ್ಣಿಸುವಾಗ "ಕಂಡನಾತಂ ಆಡಿಂಬದೊಳು ಯೋಗಿಧ್ಯೇಯ ಪರಮಾನಂದ ಚಿನ್ಮೂರ್ತಿಯನು, ತನ್ನ ತಮವೆಲ್ಲವಂ ತರಿವ ದಿವ್ಯಾಯುದಂಗಳಂ ಧರಿಸಿಹ ಚತುರ್ಬಾಹುವನು, ಪುಂಡರೀಕಾಕ್ಷನನು, ಪೀತಾಂಬರಧಾರಿಯನು, ಕರಿಮುಗಿಲೊಡ್ಡಿನೈಸಿರಿಯ ಮೈಚಿಲುವ ಕೊಂಡಾಡೆ ಕೊರಲ ಮಣಿಕೌಸ್ತುಭಂ, ಶ್ರೀವತ್ಸಲಾಂಛನವದಕೆ ನೀಡುತಿರೆ ದೋಲಾ ತೌಲ್ಯವನು. ಕಟಿಸೂತ್ರ ಕೇಯೂರ ಕಂಕಣ ಛವಿಯಿದನು ಕೆಳೆಗೊಳ್ಳೆ ಹಿಂಗೆಂದು ವರ್ಣಿಸಿದ್ದಾರೆ. ಕವಿ ಲೀಲಾಶುಕವಾದರೋ ತಮ್ಮ ಶ್ರೀಕೃಷ್ಣ ಕರ್ಣಾಮೃತದಲ್ಲಿ

ಅವತಾರಾಃ ಸಂತ್ವನ್ಯೆ
ಸರಸಿಜನಯನಸ್ಯ ಸರ್ವತೋ ಭದ್ರಾಃ
ಕೃಷ್ಣಾದನ್ಯಃ ಕೋವಾ
ಪ್ರಭವತಿ ಗೋ ಗೋಪ
ಗೋಪಿಕಾಮುಕ್ತೈಃ

ಶ್ರೀ ವಿಷ್ಣುವಿನ ಸರ್ವತಃ ಇತರ ಅವತಾರಗಳು ಹಾಗಿರಲಿ ಗೋ ಗೋಪ ಗೋಪಿಕೆಯರಿಗೆ ಮೋಕ್ಷ ನೀಡಲು ಶಕ್ತವಾದದ್ದು ಶ್ರೀಕೃಷ್ಣವತಾರ ಹೊರತು ದೇರೆ ಯಾವ ಅವತಾರದಲ್ಲಿ ಸಾಧ್ಯವಾಗಲಿಲ್ಲ ಎಂಬುವುದಾಗಿ ಭೂಭಾರ ಹರಣವೇ ಭಗವದವತಾರದ ಉದ್ದೇಶವಲ್ಲದೆ ಕೃಷ್ಣನು ಜನ ಸಾಮಾನ್ಯರ ಮದ್ಯೆ ತನ್ನ ಸಾಮಿಪ್ಯ ಸಾನ್ನಿಧ್ಯಗಳನ್ನಿತ್ತ ಮಹಾಪುರುಷ. ಶ್ರೀಕೃಷ್ಣನು ಯೋಗೀಶ್ವರ ವಿಶುದ್ಧಾತ್ಮ ಧರ್ಮಜ್ಞ, ಗೋಪಾಲ. ಗೋ ಎಂದರೆ ಇಂದ್ರಿಯ, ಇಂದ್ರಿಯಗಳನ್ನು ಪರಿಪಾಲಿಸುವ ಗೋಪಾಲನು. ಕೃಷ್ಣನ ಇತಿಹಾಸವನ್ನು ತಿಳಿಯದೇಕಾದರೆ ಋಗ್ವೇದ ಸಂಹಿತೆಯ ೧ನೇ ಮಂಡಲದ ೧೧೭ ನೇ ಸೂಕ್ತ ಮತ್ತು ೨೩ನೆಯ ಋಕ್ಕಿನಲ್ಲೂ ೧೧೭ನೇ ಸೂಕ್ತದ ೭ನೇ ಋಕ್ಕಿನಲ್ಲೂ ಕೃಷ್ಣನ ನಾಮವಿದೆ. ಅಥರ್ವಣ ಸಂಹಿತೆಯಲ್ಲಿ ಕೃಷ್ಣನ ಹೆಸರಿದೆ. ಪಾಣಿನಿಯ ಸೂತ್ರದಲ್ಲೂ ವಾಸುದೇವನ ಉಲ್ಲೇಖನವಿದೆ. ಜಗದ ಕಲ್ಯಾಣಕ್ಕೆ ನಿತ್ಯನೂತನವಾಗಿ ಸಾರಿದ ಭಗವದ್ಗೀತೆ ಶ್ರೀಕೃಷ್ಣನ ಮುಖಾರವಿಂದದಿಂದ ಬಂದ ಲೋಕಗೀತೆ. ವ್ಯಾಸರು ಭಾಗವತವನ್ನು ರಚಿಸಿ ಶ್ರೀಕೃಷ್ಣ ಚರಿತೆಯನ್ನು ನಮಗೆ ನೀಡಿ ಮಹದುಪಕಾರವನ್ನು ಮಾಡಿದ್ದಾರೆ. ಭಂಕಿಂಚಂದ್ರ ಛಟೋಪಾದ್ಯಾಯರ ಶ್ರೀಕೃಷ್ಣ ಚರಿತೆಯನ್ನು ಉಪಸಂಹಾರಮಾಡುವಾಗ ಆರ್ ವ್ಯಾಸರಾವ್ ಅವರು ಕೃಷ್ಣನನ್ನು ಕುರಿತು ಅವನು ಅಪರಾಜಯ ಅಪರಾಜಿತ, ವಿಶುದ್ಧ, ಪುಣ್ಯಮಯ ಪ್ರೀತಿಮಯ, ದಯಾಮಯ, ಧರ್ಮಾತ್ಮ ವೇದಜ್ಞ, ನೀತಿಜ್ಞ, ನಿರ್ಮಮಯೋಗಿ, ತಪಸ್ವೀ, ಅವನ ಚರಿತ್ರೆ ಅತಿಮಾನುಷವಾಗಿರುವುದು, ಅವನು ಈಶ್ವರ ಇತ್ಯಾದಿ ಹೊಗಳಿದ್ದಾರೆ. ಪುತಿನರಸಿಂಹಾಚಾರ್ಯರು ತಮ್ಮ ಗೋಕುಲ ನಿರ್ಗಮನದಲ್ಲಿ ಪೆರಿಯಾಳ್ವಾರರು ಪಲ್ಲಾಂಡು ಪಲ್ಲಾಂಡು ಹಾಡಿ ವಿಷ್ಣುವನ್ನು ಹರಿಸಿದಂತೆ ಕೃಷ್ಣನನ್ನು ಕುರಿತು--

ಬಾಳು ಬಾಳು ನೀ ಮುರಲೀಧರ
ಮನ ಮೋಹನ ಗಿರಿಧರನೇ
ಗೆಲ್ಲು ಗೆಲ್ಲು ಜನ ದೆಳಕು ಚೆಲ್ವನೀ
ಬೃಂದಾವನಚರನೇ ಲೋಕ ಮನೋಹರನೇ

ಎಂಬುವುದಾಗಿ ಮಂಗಳ ಹಾಡಿದ್ದಾರೆ.

ಶ್ರೀಕೃಷ್ಣ ಪರ ಬ್ರಹ್ಮಣೇ ನಮಃ

★★★★★★★★

# ಕುಲಶೇಖರರು ಕಂಡ ತಿರುಮಲೆ ದೇವರು

---ಎಂ. ಆರ್. ನರಸಿಂಹನ್.

(ಕೃಪೆ : ಆಳ್ವಾರ್‌ಗಳು ಕಂಡ ತಿರುವೇಂಗಡ)

ಆಳ್ವಾರುಗಳಲ್ಲಿ ಕುಲಶೇಖರರ ಭಕ್ತಿ ಇನ್ನೊಂದು ತೆರ. ಅದೇ ಒಂದು ವಿಚಿತ್ರ. ಈ ಮೊದಲು ಯಾವ ಆಳ್ವಾರುಗಳೂ ತೋರಿಸದ ಇವರ ಭಕ್ತಿಯ ಮುಖ ವೇಂಗಡನಾಥನ ವಿಚಾರದಲ್ಲಂತೂ ಅಭೂತಪೂರ್ವವಾದದ್ದಾಗಿ ಕಂಡುಬರುತ್ತದೆ. ಇವರು ಕೇರಳದ ಅರಸರಾದರೂ, ರಾಜ್ಯ, ಕೋಶ, ಪದವಿ, ವ್ಯಾಮೋಹಗಳಿಗೆ ಮರುಳಾಗದೆ ಯಾವಾಗಲೂ ದೇವರು, ಭಕ್ತರು, ದೈವಸ್ತುತಿ ಸಂಕೀರ್ತನೆಗಳಿಂದೇ ಜೀವಮಾನವನ್ನೆಲ್ಲಾ ಕಳೆದಭಕ್ತರು. ಇವರ ಪಾಶುರಗಳ ಇಂತಹ ವಿಲಕ್ಷಣ ಭಕ್ತಿಮಾರ್ಗವನ್ನು ನಾವು ಕಾಣುತ್ತೇವೆ. ಇವರ ರಚನೆ 'ಪೆರುಮಾಳ್ ತಿರುಮೊಳಿ' ೧೦೫ ಪಾಶುರಗಳಿಂದ ಕೂಡಿದೆ. ಶೈಲಿ ಕ್ಲಿಷ್ಟವಾದದ್ದೇ. ಇದೇ ಒಂದು ಸಾಹಿತ್ಯ ಪ್ರಕಾರ. ಇವರು ಒಂದು ದಶಕ-ಎಂದರೆ ಹತ್ತು ಪಾಶುರಗಳು, ಒಂದು ಮಂಗಳ ಶ್ಲೋಕಗಳಲ್ಲಿ ತಿರುವೇಂಗಡದ ಮಂಗಳಾಶಾಸನ ಮಾಡಿದ್ದಾರೆ. ಇವರು ವೇಂಗಡ, ತಿರುವೇಂಗಡ, ವಡವೇಂಗಡ, ವೇಂಗಡತ್ತಾನ್ ಎನ್ನುವ ಬಳಕೆಯಲ್ಲಿನ ವಿಶೇಷಣಗಳನ್ನೇ ಬಳಸಿದ್ದಾರೆ.

ನೀಳಾದೇವಿಗಾಗಿ ಸಪ್ತವೃಷಭಗಳನ್ನು ಜಯಿಸಿದ ಸ್ವಾಮಿಯ ಕೈಂಕರ್ಯ ಮಾಡುವುದನ್ನು ಮಾತ್ರ ನಾನು ಬೇಡುತ್ತೇನೆಯೇ ಹೊರತು, ಮಾಂಸ ಮಜ್ಜೆಗಳನ್ನು ಬೆಳೆಸುವಂತಹ ಐಶ್ವರ್ಯದಿಂದ ನಾನು ಮೆರೆಯಬೇಕೆಂಬ ಆಸೆಯನ್ನು ಕೋರುವುದಿಲ್ಲ. ಬಲಮುರಿ ಶಂಖವನ್ನು ಹಿಡಿದ ವೇಂಗಡದೊಡೆಯನ ಕೋನೇರಿಯಲ್ಲಿ ಒಂದು ಬಕವಾಗಿ ಹುಟ್ಟಿ ಕೈಂಕರ್ಯವನ್ನು ಎಸಗಲು ಬಯಸುತ್ತೇನೆ. ಚಿರಯೌವ್ವನವಾಗಲಿ, ರಂಭಾದಿ ಸ್ವರ್ಗ ಭೋಗಗಳಾಗಲಿ ಬೇಕಿಲ್ಲ; ಭೂಲೋಕ ಸಾಮ್ರಾಜ್ಯವೂ ಬೇಡ. ಜೇನುಗಳಿಂದ ಆವರಿಸಲ್ಪಟ್ಟ ಹೂ ಗೊಂಚಲಿನಿಂದ ಸುರಮ್ಯವಾದ ತಿರುವೇಂಗಡದ ಮೇಲೆ ಒಂದು ಮೀನಾಗಿ ಜನ್ಮ ತಳೆದರೂ ಸಾರ್ಥಕ. ಬ್ರಹ್ಮ ರುದ್ರ ಇಂದ್ರಾದಿಗಳು ಒಳಗೆ ಹೋಗಲು ಹಿಂಜರಿದು ದರ್ಶನಾಕಾಂಕ್ಷಿಗಳಾಗಿ ಬಾಗಿಲಲ್ಲಿ ನಿಂತಿರುವಾಗ, ಮಿಂಚಿನ ಪ್ರಕಾಶದ ಚಕ್ರವನ್ನು ಧರಿಸಿದ ವೇಂಗಡದೊಡೆಯನು ಉಗಿಯುವ ಬಾಯ್ದಂಬುಲವನ್ನು ಬಂಗಾರದ ಉಗುಳು ಪಾತ್ರೆಯಲ್ಲಿ ಹಿಡಿಯಲು ಸಿದ್ಧನಾಗಿರುವ ಊಳಿಗದವನು ನಾನಾಗಲು ಇಚ್ಛಿಸುತ್ತೇನೆ. ಆ ದೇವತೆಗಳಿಗೆ ಅಭಿಸದ ಅಂತರಂಗ ಊಳಿಗವನ್ನು ನಾನು ಕೈಗೊಳ್ಳುವ ಭಾಗ್ಯಶಾಲಿಯಾದೇನೇ? ಅಂದವಾದ ಪವಳಗಳನ್ನು ನೀಡುವ ತಂಪಾದ ಪಾಲ್ಗಡಲಿನಲ್ಲಿ ಪವಡಿಸಿರುವ ಪರಮಾತ್ಮನನ್ನು ಅಲೆಗಳು ಸೇವಿಸುತ್ತಿರಲು, ಅವನ ಪಾದಾರವಿಂದಗಳನ್ನು ಸೇವಿಸಲು ಸೊಗಸಾಗಿ ಗಾನ ಮಾಡಿಕೊಂಡಿರುವ ವೇಂಗಡದಲ್ಲಿ, ಒಂದು ಸಂಪಿಗೆಯ ಮರವಾಗಿ ನಿಲ್ಲುವ ಭಾಗ್ಯವನ್ನು ಹೊಂದುತ್ತೇನೆಯೆ? ಭೀತಿಯನ್ನುಂಟುಮಾಡುವ ಮದದಾನೆಯ ಅಂಬಾರಿಯಲ್ಲಿ ಕುಳಿತು ಮೆರೆಯುವ ರಾಜ ಭೋಗ ಭಾಗ್ಯಾದಿಗಳನ್ನು ನಾನು ಬಯಸುತ್ತಿಲ್ಲ. ನನ್ನ ಸ್ವಾಮಿಯು ಇರುವ ವೇಂಗಡದ ಮಲೆಯ ಮೇಲೆ ಒಂದು ಕಂಬವಾಗಿ ನಿಲ್ಲುವ ಭಾಗ್ಯವನ್ನು ಅಪೇಕ್ಷಿಸುತ್ತೇನೆ. ಮಿಂಚಿನಂತೆ ಬಳುಕುವ ಸೊಂಟವುಳ್ಳ ಊರ್ವಶಿ ಮೇನಕೆ ಮುಂತಾದವರ ನೃತ್ಯಗಾಯನಗಳಲ್ಲಿ ನನಗೆ ಆಸಕ್ತಿಯಿಲ್ಲ. ತೆನ್ ತೆನ (ನಿರಂತರ)ವೆಂದು ಹಾಡುತ್ತಿರುವ ತಿರುವೇಂಗಡದಲ್ಲಿ ಒಂದು ಶಿಖರವಾಗಿ ನಿಲ್ಲಬಯಸುತ್ತೇನೆ. ಬಾನನ್ನು ಆಳುವ ಪ್ರಕಾಶಮಾನವಾದ ಚಂದ್ರನಂತೆ ಶ್ವೇತಛತ್ರದಡಿಯಲ್ಲಿ ಕುಳಿತು ರಾಜಾಧಿರಾಜನಾಗಿ ಪ್ರಜೆಗಳನ್ನು ಆಳುವ ವೈಭವವೂ ಬೇಡ. ಮಧುಸುಗಂಧದಿಂದ ಆವರಿಸಿದ ಹೂದೋಟದ ತಿರುವೇಂಗಡದಲ್ಲಿ ಹರಿಯುವ ಗಿರಿಝರಿಯಾಗಿರಲು ಆಶಿಸುತ್ತೇನೆ. ಚಂದ್ರನನ್ನು ಧರಿಸಿದ ಜಟೆಯುಳ್ಳ ರುದ್ರನೂ, ಬ್ರಹ್ಮ ಇಂದ್ರಾದಿಗಳೂ, ಅವರವರ ಅಧಿಕಾರಕ್ಕನುಗುಣವಾಗಿ ಮಾಡುವ ಯಜ್ಞಫಲಗಳಾಗಿ ಅವರವರ ಈಪ್ಸೆಗಳನ್ನು ತೀರಿಸುವ ವೇದ ಪ್ರತಿಪಾದ್ಯನಾದ ಸ್ವಾಮಿಯು ಇರುವ ಪರಿಮಳಭರಿತವಾದ, ಶೀತಲವಾದ ತಿರುಮಲೆಯ ಮೇಲೆ ಭಕ್ತರ ಪಾದದಡಿಯ ಹಾದಿಯಾಗಿರಲು ಬಯಸುತ್ತೇನೆ. ತನ್ನ ತಿರುವಡಿಗಳಲ್ಲಿ ತಲೆವಾಗಿಸಿದ ಭಕ್ತರ ಪಾಪ ಫಲವಾದ ಸಂಸಾರ ಸಂಬಂಧಗಳನ್ನೆಲ್ಲಾ ಕತ್ತರಿಸಿಹಾಕಿಬಿಡುವ ಪರಮಾತ್ಮನೇ! ಆಶ್ರಿತರ ವಿಷಯದಲ್ಲಿ ಆಸಕ್ತಿಯುಳ್ಳವನೆ! ವೇಂಗಡದವನೇ! ನಿನ್ನ ಗುಡಿಯ ಬಾಗಿಲಿನಲ್ಲಿ ನಮ್ಮಂಥವರೂ, ಬಾನವರೂ, ಅಪ್ಸರೆಯರೂ ದರ್ಶನಕ್ಕೆ ಬಂದಾಗ ಅವರ ಪಾದಸ್ಪರ್ಶನಕ್ಕೆ ಒಳಪಡುವಂತಹ ಹೊಸ್ತಿಲಾಗಿ ಇದ್ದುಕೊಂಡು ನಿನ್ನ ಹವಳದಂತಹ ಬಾಯನ್ನು ಕಾಣುತ್ತೇನೆಯೇ? ಸ್ವರ್ಗಾಧಿಪತ್ಯವೇ ದೊರೆತರೂ ಸರಿ, ಊರ್ವಶಿಯು ಊಳಿಗ ವೆಸಗಿದರೂ ಸರಿಯೆ ನನಗೆ ಬೇಕಾಗಿಲ್ಲ. ಚೆಂಬವಳದಂತಹ ಬಾಯುಳ್ಳ ತಿರುವೇಂಗಡ ದೊಡೆಯನ ಬಂಗಾರದಂತಹ ಗಿರಿಯ ಮೇಲೆ ಏನಾದರೊಂದು ಆಗಿಯೇ ಆಗುತ್ತೇನೆ. ಘನವಾದ ತೊರೆಗಳಿಂದ ಒಡಗೊಂಡ ವಡವೇಂಗಡದವನ ಬಂಗಾರದಂತಹ ಚರಣಗಳನ್ನು ಸೇವಿಸಲಾಶಿಸಿ, ಶತ್ರುಗಳ ಸಂಹಾರ ಕಾರ್ಯವೇ ವೃತ್ತಿಯುಳ್ಳ ಕುಲಶೇಖರರು ನುಡಿದ ಲಕ್ಷಣೋಪೇತವಾದ ಪಾಶುರಗಳನ್ನು ಬಲ್ಲವರು ಭಗವತ್ ಪ್ರೀತಿಗೆ ಅರ್ಹರಾಗುತ್ತಾರೆ.

'ಏನಾದರೂ ಆಗುತ್ತೇನೆ' ಎಂದು ಆಳ್ವಾರ್ ಹೇಳಿರುವುದಕ್ಕೆ ಅನಂದಳ್ವಾರ್ ಎನ್ನುವ ಆಚಾರ್ಯರು "ತಿರುವೇಂಗಡಮುಡೈಯಾನೇ ಆದರೂ ಈ ಮಾತಿಗೆ ಹೊಂದುತ್ತದೆ" ಎಂದಿರುವರಂತೆ! ಅದರ ಅರ್ಥವನ್ನು ಪೆರಿಯವಾಚ್ಚಾನ್ ಪಿಳ್ಳೈ ಎನ್ನುವ ವ್ಯಾಖ್ಯಾನ ಚಕ್ರವರ್ತಿಗಳು ರಸಭರಿತವಾದ ವ್ಯಾಖ್ಯಾನ ಮಾಡಿದ್ದಾರೆ. ಏನೆಂದರೆ "ಶೇಷಭೂತರಾದವರಿಗೆ ಹೊರತಾಗಿ ಶೇಷಿಯಾಗಿರುವನೆಂದರೂ ಸರಿಹೊಂದುತ್ತದೆ" ಎಂದಿದ್ದಾರೆ. (ಶೇಷರು ಎಂದರೆ ಜೀವರು; ಶೇಷಿ ಎಂದರೆ ಪರಮಾತ್ಮ) ಆ ಶೇಷನಾಗಿರದಿದ್ದರೆ ಸರಿ ಎನ್ನುವ ಅರ್ಥವಾಗುತ್ತದೆ. ಇದಕ್ಕೆ ಭಟ್ಟರ ವಿವರಣೆ ಹೀಗಿದೆ "ನಾನು ಅರಿಯುವುದು ಬೇಡ, ತಿರುವೇಂಗಡದೊಡೆಯನು ಕೂಡ ಅರಿಯುವುದು ಬೇಡ. ಕಂಡವರು ಅರಿತು ಶ್ಲಾಘಿಸುವುದೂ ಬೇಡ. ತಿರುಮಲೆಯ ಮೇಲಿರುವ ಪದಾರ್ಥವಾದರೆ ಅದೇ ಸಮಂಜಸ".

ಇದೊಂದು ವಿಚಿತ್ರ ರೀತಿಯ ಸಾಹಿತ್ಯಶೈಲಿಯಾಗಿದೆ. ಆದರೂ ಆಕರ್ಷಕವಾಗಿದೆ. ಈ ಹೊಸ ತೆರನಾದ ಭಕ್ತಿಭಾವದ ಆಕರ್ಷಣೆಯಿಂದ ನಮ್ಮನ್ನು ಬಿಡಿಸಿಕೊಂಡು ಪೆರಿಯಾಳ್ವಾರ್ ಅವರ ತಪಸ್ಸೆ ಎಂತಹುದೆಂದು ಮನಗಾಣೋಣ.



ದರ್ಶಿಸಿ ! ಆನಂದಿಸಿ

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
## ತಿರುಮಲೆ

# ನವರಾತ್ರಿ ಬ್ರಹ್ಮೋತ್ಸವ ಕಾರ್ಯಕ್ರಮಗಳು

## 13-10-96 ರಿಂದ 21-10-96 ವರೆಗೆ





| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 13-10-96 | ಭಾನು | ತಿರುಚ್ಚಿ ಉತ್ಸವ | ದೊಡ್ಡಶೇಷವಾಹನ |
| 14-10-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 15-10-96 | ಮಂಗಳ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 16-10-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 17-10-96 | ಗುರು | ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 18-10-96 | ಶುಕ್ರ | ಹನುಮದ್ವಾಹನ ಸಂ\|\| ಸುವರ್ಣರಥೋತ್ಸವ, ವಸಂತೋತ್ಸವ | ಗಜವಾಹನ |
| 19-10-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 20-10-96 | ಭಾನು | ರಜತರಥೋತ್ಸವ | ಅಶ್ವವಾಹನ |
| 21-10-96 | ಸೋಮ | ಪಲ್ಲಕ್ಕಿ ಉತ್ಸವ , ಚಕ್ರಸ್ನಾನ | ತಿರುಚ್ಚಿವಾಹನ, |

ಈ ಹತ್ತು ದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತ ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

ನೀವೂ ಬನ್ನಿ ನಿಮ್ಮವರನ್ನೂ ಕರೆ

# ವಾರ್ತಾಲಹರಿ

## ತಿ. ತಿ. ದೇವಸ್ಥಾನಗಳಿಗೆ ಹೆಚ್ಚಿನ ಗಣಕಯಂತ್ರಗಳು

ತಿರುಮಲೆ - ತಿರುಪತಿ ದೇವಸ್ಥಾನಗಳಲ್ಲಿ ಹೆಚ್ಚು ಕಂಪ್ಯೂಟರ್‌ಗಳನ್ನು ಬಳಸಿ ಎಲ್ಲರೀತಿಯ ವ್ಯವಹಾರಗಳನ್ನು ಕ್ರಮಬದ್ಧವಾಗಿ ವ್ಯವಸ್ಥಿತವಾಗಿ ನಡೆಯುವಂತೆ ಮಾಡಲಾಗುವುದು. ತಿರುಪತಿಯ ಮಾರ್ಕೆಟಿಂಗ್ ವಿಭಾಗಕ್ಕೂ ಹಾಗೂ ನಿತ್ಯಾನ್ನದಾನಯೋಜನೆಯ ಉಗ್ರಾಣಕ್ಕೂ ಕಂಪ್ಯೂಟರ್ ಜೋಡಣೆ ನಡೆಯುವುದು. ಇದೇ ಪದ್ಧತಿಯನ್ನು ತಿರುಮಲೆಯ ಆಲಯದ ಪೋಟು (ಅಡಿಗೆಮನೆ) ಹಾಗೂ ಕಲ್ಯಾಣಕಟ್ಟೆಗಳಿಗೂ ವಿಸ್ತರಿಸಲಾಗುವುದು. ಸೆಪ್ಟಂಬರ್ 10 ರೊಳಗೆ ತಿ.ತಿ.ದೇ. ಧರ್ಮಸತ್ರಗಳು, ಎಸ್. ವಿ. ಅತಿಥಿಗೃಹಗಳ ಕೋಣೆಗಳನ್ನು ಕಂಪ್ಯೂಟರ್ ಮೂಲಕ ಭಕ್ತರಿಗೆ ನೀಡಲಾಗುವಂತೆ ಮಾಡಲಾಗುವುದು.

## ತಿರುಮಲೆಯಲ್ಲಿ ಪ್ರಧಾನಮಂತ್ರಿ

ಭಾರತದ ಪ್ರಧಾನಮಂತ್ರಿ ಶ್ರೀ ಎಚ್. ಡಿ. ದೇವೇಗೌಡ ಅವರು ತಮ್ಮ ಧರ್ಮಪತ್ನಿ ಶ್ರೀಮತಿ ಚೆನ್ನಮ್ಮ ಹಾಗೂ ಇತರ ಕುಟುಂಬ ಸದಸ್ಯರೊಡನೆ ಆಗಸ್ಟ್ 23 ರ ಶುಕ್ರವಾರ ಸಂಜೆ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ರೇಣಿಗುಂಟ ವಿಮಾನಾಶ್ರಮದಿಂದ ಕಾರಿನಲ್ಲಿ ತಿರುಮಲೆಗೆ ಆಗಮಿಸಿದ ಪ್ರಧಾನಮಂತ್ರಿಗಳನ್ನು ತಿರುಮಲೆಯಲ್ಲಿನ ಶ್ರೀ ಪದ್ಮಾವತೀ ಅತಿಥಿಗೃಹದ ಬಳಿ ತಿ. ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಮತ್ತಿತರರು ಸ್ವಾಗತ ನೀಡಿದರು. ಸಂಜೆ ಏಳುಗಂಟೆಯ ಹೊತ್ತಿನಲ್ಲಿ ಅವರಿಗೆ ಆಲಯದ ಬಳಿ ಸಂಪ್ರದಾಯರೀತ್ಯಾ ಸ್ವಾಗತ ನೀಡಲಾಯಿತು. ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ರಾಂಬಾಬು, ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಜೆ. ಇ. ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸಂರಕ್ಷಣಾಧಿಕಾರಿ ಶ್ರೀ ಈಶ್ವರ ರೆಡ್ಡಿ, ಆಸ್ಥಾನಪಂಡಿತರು ಶ್ರೀ ಮಾಡಬಾಕಂ ಶ್ರೀನಿವಾಸಾಚಾರ್ಯುಲು ಮೊದಲಾದವರು ಸ್ವಾಗತಿಸಿದರು ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಲ್ಲಿ



ಹದಿನೈದು ನಿಮಿಷವಿದ್ದ ಪ್ರಧಾನಮಂತ್ರಿ ಪ್ರದಕ್ಷಿಣಾಪಥದಲ್ಲಿ ಸುತ್ತಿ ಬಂದು ವಿಮಾನ ವೆಂಕಟೇಶ್ವರನನ್ನು ದರ್ಶಿಸಿ ಹುಂಡಿಯಲ್ಲಿ ಕಾಣಿಕೆಯನ್ನು ಅರ್ಪಿಸಿದರು. ನಂತರ ಶ್ರೀರಂಗನಾಯಕ ಮಂಟಪದಲ್ಲಿ ಅವರನ್ನು ಸ್ವಾಮಿಯ ಶೇಷವಸ್ತ್ರದಿಂದ ಸತ್ಕರಿಸಲಾಯಿತು. ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಪ್ರಧಾನ ಮಂತ್ರಿಗಳಿಗೆ ಸ್ವಾಮಿ ಪ್ರಸಾದವನ್ನು ನೀಡಿದರು.

ಪ್ರಧಾನಮಂತ್ರಿ ಶ್ರೀ ದೇವೇಗೌಡರು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯವನ್ನೂ ಮಾರನೆಯ ದಿನ ಸಂದರ್ಶಿಸಿ ಆರಾಧಿಸಿದರು.

## ಮದರಾಸಿನಿಂದ ಪಾದಯಾತ್ರೆ

ಮದರಾಸಿನಿಂದ ರವಿ ವೆಹಿಕಲ್ ಫ್ಯಾಕ್ಟರಿಯ ಸುಮಾರು 250 ಮಂದಿ ಯಾತ್ರಿಕರು ಮದರಾಸಿನ ಆವಡಿಯಿಂದ ಪಾದಯಾತ್ರೆಯಲ್ಲಿ ನಾಲ್ಕು ದಿನ ನಡೆದು ತಿರುಮಲೆಯನ್ನು ಆಗಸ್ಟ್ 1 ರಂದು ಸೇರಿ ಸ್ವಾಮಿಯನ್ನು ಸಂದರ್ಶಿಸಿದರು. ತಾವುಗಳು ಪ್ರತಿ ವರ್ಷವೂ ಪಾದಯಾತ್ರೆಯಲ್ಲಿಯೇ ಬಂದು ಸ್ವಾಮಿಯನ್ನು ಸೇವಿಸುವುದು; ಜುಲೈ ಆಗಸ್ಟ್ ತಿಂಗಳುಗಳಲ್ಲಿ ಈ ಪಾದಯಾತ್ರೆ ವರ್ಷವರ್ಷವೂ ನಡೆಯುವುದು ಎಂದು ತಿಳಿಸಿದರು.



## ತಿರುಕರ ನಿಧನ



ಚಿತ್ರದುರ್ಗದ ಮಲ್ಲಾಡಿಹಳ್ಳಿಯ ಖ್ಯಾತ ಆಯುರ್ವೇದ ವೈದ್ಯ ಅನಾಥಬಂಧು, ಯೋಗಪಟು ಶತಾಯುಷಿ ತಿರುಕ ಶ್ರೀ ರಾಘವೇದ್ರಸ್ವಾಮಿಜೀ ಅವರು ಆಗಸ್ಟ್ 3 ರಂದು ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ.

107 ವರ್ಷದ ಸ್ವಾಮಿಜೀ ಅವರು ಕಳೆದ ಒಂದು ತಿಂಗಳಿನ ಹಿಂದೆ ಪಾರ್ಶ್ವವಾಯುವಿಗೆ ತುತ್ತಾಗಿ, ಪ್ರಜ್ಞಾಹೀನ ಸ್ಥಿತಿಯಲ್ಲಿಯೇ ಇದ್ದು ಆಗಸ್ಟ್ 3ರ ರಾತ್ರಿ ತಮ್ಮ ಅಪಾರ ಶಿಷ್ಯರನ್ನು, ತಾವೇ ಕಟ್ಟಿ ಬೆಳೆಸಿದ ಅನಾಥಾಶ್ರಮ, ಆಸ್ಪತ್ರೆ, ಎಲ್ಲವನ್ನೂ ಬಿಟ್ಟು ಹೋಗಿದ್ದಾರೆ.

ಆಯುರ್ವೇದ, ಯೋಗಾಭ್ಯಾಸ, ತತ್ವಶಾಸ್ತ್ರದಲ್ಲಿ ಪರಿಣತರಾಗಿ, ಪರಿವ್ರಾಜಕರಂತೆ ತಿರುಗುತ್ತಿದ್ದ ಶ್ರೀ ರಾಘವೇಂದ್ರಸ್ವಾಮಿಜೀ 1943 ರಲ್ಲಿ ಪೂರ್ವ ನಿಯೋಜನೆಯಿಲ್ಲದೆ ಮಲ್ಲಾಡಿಹಳ್ಳಿಯಲ್ಲಿ ನಿಂತರು. ಒಂದು ಅನಾಥಾಶ್ರಮ ಸ್ಥಾಪಿಸಿದರು. ಮಕ್ಕಳನ್ನು ಅನಾಥರನ್ನು ಪೋಷಿಸುವಾಗ ಅವರು ಶಿಕ್ಷಣಕ್ಕಾಗಿ ಶಾಲೆ, ಅವರ ಆರೋಗ್ಯಪರಿರಕ್ಷಣೆ - ಹೀಗೆ ಆಸ್ಪತ್ರೆ, ಯೋಗ ಶಿಕ್ಷಣ ಕೇಂದ್ರ ಎಲ್ಲವನ್ನೂ ಬೆಳೆಸಿದರು. ಅದಕ್ಕಾಗಿಯೇ ಸ್ವಾಮಿಜೀ ತಿರುಕರಾಗಿ ಜೋಳಿಗೆ ಹಿಡಿದರು. ತಿರುಕ ಕಾವ್ಯನಾಮದಲ್ಲಿ ಅವರು ಉದ್ಬೋಧಕ ಸಾಹಿತ್ಯವನ್ನೂ ನೀಡಿದರು. ಆಯುರ್ವೇದವನ್ನು ಕುರಿತು ಮೂರು ಪುಸ್ತಕಗಳು, ಯೋಗಸಾಧನೆಯನ್ನು ಕುರಿತು ಎಂಟು ಪುಸ್ತಕಗಳನ್ನು ಬರೆದು ಚಿತೆಯೋ ಸಮಾಧಿಯೋ ಎಂಬ ವಿಚಾರ ಪ್ರದಾನ ಪುಸ್ತಕವನ್ನೂ ರಚಿಸಿದರು. ತಮಗೆ ಬಂದ ಎಲ್ಲ ಪ್ರಶಸ್ತಿಗಳನ್ನೂ ನಿರಾಕರಿಸಿದ ನಿರಾಡಂಬರ ಮೂರ್ತಿ ಆದ ಅವರು ತಮ್ಮನ್ನು ಸ್ವಾಮಿಜೀ ಎಂದೂ ಕರೆದುಕೊಳ್ಳದಷ್ಟು ನಿರಾಸಕ್ತರಾಗಿ ನಿಂತವರು - ನಡೆದವರು.

ದಿ ವೀಕ್ ಆಂಗ್ಲ ವಾರಪತ್ರಿಕೆಯ "ವರ್ಷದ ವ್ಯಕ್ತಿ"ಯಾಗಿ ಅದರ ಆರಂಭಕಾಲದಲ್ಲಿಯೇ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಪಡೆದ ಸ್ವಾಮಿಜೀ ಅವರಿಗೆ ಅಷ್ಟೇ ವ್ಯಾಪಕವಾದ ರೋಗಿಗಳ ಶುಶ್ರೂಷೆಯ ಅವಕಾಶವಾಯಿತು. ರೋಗಿಯಲ್ಲಿ ದೇವರನ್ನು ಕಂಡ ಅವರಿಂದ ಚಿಕಿತ್ಸೆ ಪಡೆದವರು ಲಕ್ಷಾಂತರಮಂದಿ. ದೂರದೂರಗಳಿಂದ ಬರುವವರಿಗಾಗಿ ಮನೆಯಲ್ಲಿಯೇ ಚಿಕಿತ್ಸೆ ನಡೆಸಿಕೊಳ್ಳಲು ಅನುಕೂಲವಾಗುವಂತೆ ಪ್ರತಿವರ್ಷವೂ ಚಿಕಿತ್ಸಾವಿಧಾನದ ಬಗ್ಗೆ ಶಿಕ್ಷಣಶಿಬಿರವನ್ನೂ ಯೋಗಸಾಧನೆಯ ಚಿಕಿತ್ಸಾ ಶಿಬಿರವನ್ನೂ ನಡೆಸುತ್ತಿದ್ದರು.

ನಮ್ಮ ನಡುವಿನಿಂದ ನಡೆದ ಅವರ ಆತ್ಮಕ್ಕೆ ಶಾಂತಿಯನ್ನು ಸ್ವಾಮಿ ಪ್ರಸಾದಿಸಲೆಂದು ಬೇಡುತ್ತ, ಅವರು ಬೆಳೆಸಿದ ದೀನ ಅನಾಥರುಗ್ಣ ಸೇವೆಯ ಆದರ್ಶಗಳು ಮುಂದುವರಿಯಲೆಂದು ಸಪ್ತಗಿರಿ ಹಾರೈಸುತ್ತದೆ.

## ಬೆಂಗಳೂರಿನಿಂದ ಪಾದಯಾತ್ರೆ

ಬೆಂಗಳೂರಿನ ಮದರಾಸು ರಸ್ತೆಯ ಬಯಲು ಆಂಜನೇಯಸ್ವಾಮಿ ಗುಡಿಯಿಂದ ಶ್ರಾವಣ ಮಾಸದ ಪ್ರಯುಕ್ತ ತಿರುಮಲೆಗೆ ಪಾದಯಾತ್ರೆಯಲ್ಲಿ ನೂರನಲವತ್ತು ಮಂದಿ ಭಕ್ತ ಯಾತ್ರಿಕರ ಗುಂಪು ಪಾದಯಾತ್ರೆಯ ಪರಿವ್ರಾಜಕರೆಂದೇ ಹೆಸರಾದ ಬಸವೇಶ್ವರನಗರದ ಶ್ರೀ ಹನುಮಂತಪ್ಪನವರ ನೇತೃತ್ವದಲ್ಲಿ 10-8-96 ರಂದು ನಡೆದು ತಿರುಮಲೆಯನ್ನು ಸೇರಿ ಶ್ರಾವಣಮಾಸದ ಮೊದಲದಿನ ಸ್ವಾಮಿಯನ್ನು ಆರಾಧಿಸಿತು. ದಿನವೂ ಬೆಳಿಗ್ಗೆ ಸಂಜೆಗಳಲ್ಲಿ ನಡೆಯುತ್ತ ಅಲ್ಲಲ್ಲಿ ವಿಶ್ರಾಂತಿ ಪಡೆಯುತ್ತ ತಿರುಪತಿಯನ್ನು ತಲುಪಿ, ಅಲಿಪಿರಿಯಿಂದ ಗೋವಿಂದ ನಾಮಘೋಷದೊಡನೆ ಬೆಟ್ಟವನ್ನೇರಿ ಸ್ವಾಮಿಯನ್ನು ಸಂದರ್ಶಿಸಿದ ನಂತರ ಗುಂಪು ವಿಸರ್ಜನೆಯಾಯಿತು.

ಶ್ರೀ ಹನುಮಂತಪ್ಪನವರ ನೇತೃತ್ವದಲ್ಲಿ ಎಚ್. ಎಲ್ ಮತ್ತು ಸುತ್ತ ಮುತ್ತಲ ಕಾರ್ಖಾನೆಗಳ ಕಾರ್ಮಿಕರು, ಇತರ ಕರ್ಷಕ, ಯುವಕ, ವೃದ್ಧ ಬಾಲಕರ ಈ ತಂಡದಲ್ಲಿ ಐದುಮಂದಿ ಮಹಿಳೆಯರೂ ಇದ್ದರು. ಇದೇ ರೀತಿಯ ಪಾದಯಾತ್ರೆಯನ್ನವರು ಪ್ರತಿವರ್ಷವೂ ನಡೆಸುತ್ತಿದ್ದು ವರ್ಷೇವರ್ಷೇ ಹೆಚ್ಚು ಹೆಚ್ಚು ಯಾತ್ರಿಕರು ಪಾಲುಗೊಳ್ಳುತ್ತಿದ್ದಾರೆ ಎಂದು ತಿಳಿದು ಬಂದಿದೆ. ಧರ್ಮಸ್ಥಳ, ಮಂತ್ರಾಲಯಗಳೂ ಈ ಪಾದಯಾತ್ರಾ ಕ್ಷೇತ್ರಗಳಲ್ಲಿ ಸೇರಿರುವುವು.

## 35 ಸಂಪುಟಗಳಲ್ಲಿ ಅನ್ನಮಾಚಾರ್ಯರ ಸಂಕೀರ್ತನೆಗಳು

ತೆಲುಗಿನ ಸುಪ್ರಸಿದ್ಧ ಕೀರ್ತನಕಾರ, ಶ್ರೀ ವೆಂಕಟೇಶ್ವರಸ್ವಾಮಿಯ ಅಂತರಂಗಭಕ್ತ ಅನ್ನಮಾಚಾರ್ಯರ ಸಂಕೀರ್ತನೆಗಳು 1978 ರಿಂದಾಚೆಗೆ ತಿ.ತಿ.ದೇ. ಗಳಿಂದ ವ್ಯಾಪಕವಾಗಿ ಪ್ರಕಟವಾಗಿದ್ದರೂ ಅವಾವುವೂ ಇಂದು ಆಸಕ್ತರಿಗೆ ಅಂಗಡಿಯಲ್ಲಿ ದೊರೆಯದ ಪುಸ್ತಕಗಳಾಗಿದ್ದು, ಅವುಗಳನ್ನು ತ್ವರಿತಗತಿಯಲ್ಲಿ ತಿ. ತಿ.ದೇ. ಮುದ್ರಣಾಲಯದಲ್ಲಿ ಪುನರ್ಮುದ್ರಿಸಲಾಗುವುದು ಎಂದು ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ದೇಶಕರಾದ ಡಾ|| ಮೇಡಸಾನಿ ಮೋಹನ್ ತಿಳಿಸಿದ್ದಾರೆ.

ಅನ್ನಮಾಚಾರ್ಯರ ಸಂಕೀರ್ತನೆಗಳ ಪದಾರ್ಥ ಕೋಶವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಲಾಗುವುದೆಂದು ತಿಳಿಸಿದ ಅವರು ಇದರಿಂದಾಗಿ ಜನಸಾಮಾನ್ಯರಿಗೂ ಅನ್ನಮಾಚಾರ್ಯರ ಸಂಕೀರ್ತನೆಗಳು ಮತ್ತಷ್ಟು ಹತ್ತಿರವಾಗಲು ಸಹಾಯವಾಗುತ್ತದೆ ಎಂದರು. ತಾಳ್ಳಪಾಕ ಕವಿಗಳೆಂದು ಪ್ರಸಿದ್ಧರಾದ ಪೆದ್ದ ತಿರುಮಲಾಚಾರ್ಯ, ಚಿನ್ನ ತಿರುಮಲಾಚಾರ್ಯ, ತಾಳ್ಳಪಾಕ ತಿಮ್ಮಮ್ಮ ಇವರುಗಳ ಲಭ್ಯ

ಕೃತಿಗಳನ್ನೂ ಪ್ರಕಟಿಸಲಾಗುವುದು ಎಂದು ಸುದಿ ಯುತ್ತ ಸೆಪ್ಟಂಬರ್ 7-8 ರಲ್ಲಿ ಹೈದರಾಬಾದಿನಲ್ಲಿ ನಡೆಯುವ ಅನ್ನಮಾಚಾರ್ಯ ಉತ್ಸವದಲ್ಲಿ ಖ್ಯಾತ ಗಾಯಕಿ ಶ್ರೀಮತಿ ಶೋಭಾರಾಜು ಅವರು ಸ್ವರ ನೀಡಿರುವ ಅನ್ನಮಯ್ಯ ಕೀರ್ತನೆಗಳ ಧ್ವನಿಸುರುಳಿ ಯನ್ನು ಬಿಡುಗಡೆ ಮಾಡಲಾಗುವುದು ಎಂದು ತಿಳಿ ಸಿದರು.

## ತಿ.ತಿ.ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ತಿರುಪತಿಯಲ್ಲಿನ ಬಾಲಾಜೀ ವಿಕಲಾಂಗ ಆಸ್ಪತ್ರೆ ಸಂಶೋಧನ ಕೇಂದ್ರವನ್ನು 8 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಹವಾನಿಯಂತ್ರಿತವನ್ನಾಗಿ ಪರಿವರ್ತಿಸಬೇಕೆಂದು ತೀರ್ಮಾನಿಸಲಾಗಿದೆ. ಇದರೊಡನೆಯೇ 33.80 ಲಕ್ಷ ರೂಗಳ ವೆಚ್ಚದಲ್ಲಿ ವಿದ್ಯುತ್ ಜನರೇಟರ್‌ಗಳ ಏರ್ಪಾಡು ಮಾಡಬೇಕೆಂದೂ ತೀರ್ಮಾನಿಸಲಾಗಿದೆ.

ತಿರುಮಲೆಯಲ್ಲಿ ಕೆಲಸಮಾಡುವ ತಿ.ತಿ.ದೇ. ಅಧಿಕಾರಿಗಳು ಹಾಗೂ ಸಿಬ್ಬಂದಿಗಾಗಿ ವಿಶ್ರಾಂತಿ ಗೃಹವನ್ನು 80 ಲಕ್ಷ ರೂಗಳ ವೆಚ್ಚದಲ್ಲಿ ಅಲ್ಲಿನ ಪುಲ್ಲಾರೆಡ್ಡಿ ತೋಟದಲ್ಲಿ ನಿರ್ಮಿಸಬೇಕೆಂದು ತೀರ್ಮಾನಿಸಲಾಗಿದೆ.

ರೂಯಾ ಆಸ್ಪತ್ರೆಯ ಮಕ್ಕಳ ಚಿಕಿತ್ಸಾ ವಿಭಾಗದ ಅಭಿವೃದ್ಧಿಗಾಗಿ 2 ಲಕ್ಷ ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

ತಿರುಪತಿಯ ಅಂಬೇಡ್ಕರ್ ವಿಗ್ರಹದ ಬಳಿ 7.5 ಲಕ್ಷ ರೂಗಳ ವೆಚ್ಚದಲ್ಲಿ ಮೂರು ಎತ್ತರ ದೀಪಗಳನ್ನು ಸ್ಥಾಪಿಸಲು ತೀರ್ಮಾನಿಸಲಾಗಿದೆ.

ತಿರುಮಲೆಯ ಸಮಗ್ರ ಅಭಿವೃದ್ಧಿಯೋಜನೆಯನ್ನು ರೂಪಗೊಳಿಸಲು ನಿಪುಣರ ಸಂಘವನ್ನು ನಿಯಮಿಸಲು ತೀರ್ಮಾನಿಸಲಾಗಿದೆ.

ತಿ.ತಿ.ದೇ. ಗಳಲ್ಲಿನ ಮಾರ್ಕೆಟಿಂಗ್ ವಿಭಾಗವನ್ನು ಕಂಪ್ಯೂಟರೀಕರಣಗೊಳಿಸಲು ತೀರ್ಮಾನಿಸಲಾಗಿದೆ.

ಭಜನ ಕೀರ್ತನೆಗಳ ಸಂಪ್ರದಾಯವನ್ನು ಉತ್ತರ ಹಿಂದೂಸ್ಥಾನದಲ್ಲೂ ವ್ಯಾಪಕವಾಗಿ ಪ್ರಚಾರ ಮಾಡಬೇಕೆಂದು ತೀರ್ಮಾನಿಸಲಾಗಿದೆ.

ತಿ.ತಿ.ದೇ ಬೋರ್ಡ್ ನಿರ್ಣಯಗಳನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಪತ್ರಿಕಾಸಮಾವೇಶದಲ್ಲಿ ತಿಳಿಸಿದರು. ತಿರುಪತಿಯಲ್ಲಿ ಭಜನಸಪ್ತಾಹವನ್ನು ಇದೇ ನವಂಬರ್ ಡಿಸೆಂಬರ್ ತಿಂಗಳಲ್ಲಿ ನಡೆಸುವುದಾಗಿಯೂ, ಖ್ಯಾತ ಭಜನಗಾಯಕ ಶ್ರೀ ಅನೂಪ್ ಝಲೋಟ ಅವರು ಹಾಡಿದ ಶ್ರೀ ವೆಂಕಟೇಶ್ವರಸ್ವಾಮಿ ಭಜನೆಯ ಧ್ವನಿಸುರುಳಿಯನ್ನು ಬಿಡುಗಡೆ ಮಾಡುವುದಾಗಿಯೂ ಅವರು ತಿಳಿಸಿದರು.

## ಸ್ವಾಮಿ ಆಲಯದಲ್ಲಿ ಸರ್ಕ್ಯೂಟ್ ಟಿ.ವಿ.

ತಿರುಮಲೆಯ ಸ್ವಾಮಿಯ ಆಲಯದ ಜಯ ವಿಜಯ ದ್ವಾರದಿಂದ ರಾಮರ್ ಮೇಡೈವರೆಗೆ ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ.ಯನ್ನು ಏರ್ಪಾಡು ಮಾಡಿ ಸ್ವಾಮಿ ದರ್ಶನಕ್ಕೆ ಆಗಮಿಸುವ ಯಾತ್ರಿಕರ ಸಾಲಿನಲ್ಲಿ ಯಾವುದೇ ವಿಧವಾದ ಅವಾಂಛನೀಯ ಘಟನೆಯೂ ಆಗದಿರುವಂತೆ ನೋಡಿಕೊಳ್ಳಲಾಗುವುದು ಎಂದು ವರದಿಯಾಗಿದೆ. ಯಾತ್ರಿಕರು ನಿರಭ್ಯಂತರರಾಗಿ, ಸ್ವಾಮಿಯನ್ನು ದರ್ಶಿಸುವಲ್ಲಿ ತಿ.ತಿ.ದೇ. ನಡೆಸುತ್ತಿರುವ ಪ್ರಯತ್ನಗಳಲ್ಲಿ ಇದು ಹೆಚ್ಚು ಪ್ರಯೋಜನಕಾರಿಯಾಗಬಲ್ಲದೆಂದು ತಿಳಿಸಲಾಗಿದೆ.

## ಸ್ವಾಮಿಯ ಸೇವೆಯಲ್ಲಿ ಮುಖ್ಯಕಾರ್ಯದರ್ಶಿ

ತಿರುಮಲೆಯ ಸ್ವಾಮಿಯ ದರ್ಶನಾರ್ಥವಾಗಿ ಆಂಧ್ರಪ್ರದೇಶದ ಸರಕಾರದ ಮುಖ್ಯಕಾರ್ಯದರ್ಶಿ ಶ್ರೀ ಎಂ. ಎಸ್. ರಾಜಾಜಿ ಅವರು ತಿರುಪತಿಯಿಂದ ಕಾಲುದಾರಿಯಲ್ಲಿ ನಡೆದು ಶುಕ್ರವಾರ ದಿನಾಂಕ 9-8-96 ರಂದು ತಿರುಮಲೆಯನ್ನು ಸೇರಿ ಕುಟುಂಬ ಸಹಿತರಾಗಿ ವೈಕುಂಠ ಕ್ಯೂಕಾಂಪ್ಲೆಕ್ಸ್ 30 ರೂ. ಪ್ರತ್ಯೇಕ ಪ್ರವೇಶದ್ವಾರದ ಮೂಲಕ ಸ್ವಾಮಿ ಆಲಯಕ್ಕೆ ಆಗಮಿಸಿದರು. ಅವರನ್ನು ಮೊದಲಿಗೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಸ್ವಾಗತಿಸಿದರೆ ಆಲಯದ ಬಳಿ ಡೆ.ಇ.ಓ. ಶ್ರೀ ಎ. ಸುಬ್ರಹ್ಮಣ್ಯಂ ಮತ್ತಿತರ ಅಧಿಕಾರಿಗಳು ಸ್ವಾಗತಿಸಿದರು. ಶ್ರೀಯುತರೊಡನೆ ಚಿತ್ತೂರು ಜಿಲ್ಲಾಧಿಕಾರಿ ಶ್ರೀ ನರಸಿಂಗ ರಾವ್ ಅವರೂ ಸ್ವಾಮಿದರ್ಶನ ಪಡೆದರು.

## ಬೆಂಗಳೂರಿನಲ್ಲಿ ವ್ಯಾಸರಾಜೋತ್ಸವ

ಬೆಂಗಳೂರಿನ ಮಲ್ಲೇಶ್ವರದ ಮಾಧ್ವ ಸಂಘದ ಆಶ್ರಯದಲ್ಲಿ, ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ನವರು ವ್ಯಾಸರಾಜರ ಜೀವನ - ಸಾಹಿತ್ಯ ವಿಚಾರಗೋಷ್ಠಿಯನ್ನು ಆಗಸ್ಟ್ 17 ರಿಂದ ಮೂರುದಿನಗಳ ಕಾಲ ಏರ್ಪಡಿಸಿದ್ದು ಸ್ಥಳೀಯರ ಭಾಗವಹಿಸುವಿಕೆಯಿಂದ ಯಶಸ್ವಿಯಾಯಿತು.

ದಿನಾಂಕ 17 ರ ಶನಿವಾರ ನಡೆದ ಗೋಷ್ಠಿಯಲ್ಲಿ ವ್ಯಾಸರಾಜರ ಕೃತಿಗಳಲ್ಲಿ ದ್ವೈತ ತತ್ವವನ್ನು ಕುರಿತು ಶ್ರೀ ವ್ಯಾಸನಕೆರೆ ಪ್ರಭಂಜನ ಅವರೂ, ವ್ಯಾಸರಾಜರ ಕೃತಿಗಳಲ್ಲಿ ಕೃಷ್ಣಲೀಲೆಯನ್ನು ಕುರಿತು ಶ್ರೀ ಹಯವದನ ಪುರಾಣಿಕ ಅವರೂ, ಉಪನ್ಯಾಸ ನೀಡಿದರು.

ಭಾನುವಾರದಂದು ಡಾ|| ಜಯಲಕ್ಷ್ಮಿ ಮಂಗಳಮೂರ್ತಿ, ಶ್ರೀ ಜಯಸಿಂಹ, ಶ್ರೀ ಆನಂದತೀರ್ಥಾಚಾರ್ಯ ಹಾಗೂ ಶ್ರೀ ಶೇಷಗಿರಿ ರಾಯರು ವ್ಯಾಸರಾಯರ ಕೃತಿಗಳ ವಿವಿಧ ಮುಖಗಳ ಬಗ್ಗೆ ಮಾತನಾಡಿದರು.

ಸೋಮವಾರ ಶ್ರೀ ಅರಳು ಮಲ್ಲಿಗೆ ಪಾರ್ಥಸಾರಥಿ ಅವರು ಪ್ರಬಂಧ ಮಾಡಿಸಿದರು. ತತ್ಸಂಬಂಧದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯ ವ್ಯವಸ್ಥಾಪಕ ಸಂಪಾದಕ ಶ್ರೀ ಶಾಮರಾವ್ ಅವರನ್ನು ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ಸನ್ಮಾನಿಸಿದರು. ಶ್ರೀ ಆದ್ಯರಾಮಾಚಾರ್ಯರು ಅವರಿಗೆ ರೇಷ್ಮೆಶಾಲು ಹೊದಿಸಿ ಸತ್ಕರಿಸಿದರು.



## ಸಂಸ್ಕೃತ ಪ್ರಶಸ್ತಿ

ಭಾರತದ ಇಪ್ಪತ್ತೆರಡು ಮಂದಿ ಭಾಷಾಸೇವಕ ವಿದ್ವಾಂಸರನ್ನು ರಾಷ್ಟ್ರಪತಿಗಳ ಪ್ರಶಸ್ತಿಗಾಗಿ ಆಯ್ಕೆ ಮಾಡಲಾಗಿದ್ದು ಅವುಗಳಲ್ಲಿ ಹದಿನೈದು ಮಂದಿ ಸಂಸ್ಕೃತ ವಿದ್ವಾಂಸರು, ಒಬ್ಬ ಪಾಲಿ ವಿದ್ವಾಂಸರು ಸೇರಿದ್ದಾರೆ. ಆಂಧ್ರಪ್ರದೇಶದಲ್ಲಿ ಖ್ಯಾತರಾದ ಶ್ರೀ ಎಸ್.ಸಿ.ವಿ. ನರಸಿಂಹಾಚಾರ್ಯರು ಪ್ರಶಸ್ತಿ ಪಡೆದವರ ಯಾದಿಯಲ್ಲಿ ಮೊದಲಿಗರಾಗಿದ್ದಾರೆ.

ರಾಷ್ಟ್ರಪತಿಗ್ಗಳ ಪ್ರಶಸ್ತಿಯ ಕುರುಹಾಗಿ ಒಂದು ಪ್ರಶಸ್ತಿಪತ್ರದ ಜೊತೆಗೆ 20,000 ರೂಗಳ ವಾರ್ಷಿಕ (ಜೀವಿತಾವಧಿ) ವಿದ್ವಾಂಸವೇತನವನ್ನೂ ನೀಡಲಾಗುವುದು. ಇದಕ್ಕಾಗಿ ಪ್ರತ್ಯೇಕವಾಗಿ ನಡೆಸಲಾಗುವ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ರಾಷ್ಟ್ರಪತಿಗಳು ಈ ಸನ್ಮಾನವನ್ನು ನೀಡುವರೆಂದು ತಿಳಿಸಲಾಗಿದೆ.

## ನೂತನ ಸಂರಕ್ಷಣಾಧಿಕಾರಿ

ತಿರುಮಲೆ - ತಿರುಪತಿ ದೇವಸ್ಥಾನಗಳ ನೂತನ ಸಂರಕ್ಷಣಾಧಿಕಾರಿಯಾಗಿ ಬದಲಿಯ ಮೇಲೆ ಶ್ರೀ ಈಶ್ವರರೆಡ್ಡಿಯವರನ್ನು ನೇಮಕ ಮಾಡಲಾಗಿದ್ದು, ಈ ಹಿಂದೆ ಖಮ್ಮಂ ಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್ ಆಗಿ ಕಾರ್ಯನಿರ್ವಹಿಸಿದ ಶ್ರೀಯುತರು ಆಗಸ್ಟ್ 4 ರ ಭಾನುವಾರ ತಮ್ಮ ಪದವಿಯನ್ನು ಸ್ವೀಕರಿಸಿ ಸ್ವಾಮಿ ಸಂದರ್ಶನ ಪಡೆದು ಉದ್ಯೋಗದಲ್ಲಿ ಸೇರಿದ್ದಾರೆ.

## ಪಾರ್ಥಸಾರಥಿ ಭಟ್ಟಾಚಾರ್ಯರ ಶತಜಯಂತಿ

ಕೀರ್ತಿಶೇಷ ವೈಯ್ಯಾಕರಣ ಪಂಚಾನನ ವಿದ್ವತ್ಕವಿ ಸಾರ್ವಭೌಮ ಶ್ರೀ ಪಾರ್ಥಸಾರಥಿ ಭಟ್ಟಾಚಾರ್ಯರ ಶತಜಯಂತಿ ಸಭೆ 11-8-96 ರಂದು ತಿರುಮಲೆಯ ವೈಖಾನಸಾಶ್ರಮದಲ್ಲಿ ಘನವಾಗಿ ನಡೆಯಿತು. ವೈಖಾನಸಾಗಮ ಪಂಡಿತರಾಧ ಶ್ರೀ ವೇದಾಂತಂ ಅನಂತಪದ್ಮನಾಭಾಚಾರ್ಯ, ಶ್ರೀ ಮಾಡಂಬಾಕಂ ಶ್ರೀನಿವಾಸ ಭಟ್ಟಾಚಾರ್ಯ ಮತ್ತಿತರ ವೈಖಾನಸ ವಿದ್ವಾಂಸರನ್ನು ಸತ್ಕರಿಸಲಾಯಿತು. ತಿ. ತಿ. ದೇವಸ್ಥಾನಗಳ ವೈಖಾನಸಾಗಮ ಪಂಡಿತರಾಗಿ ಮೂವತ್ತು ಸಂವತ್ಸರಗಳಿಗೂ ಹೆಚ್ಚು ಸೇವೆ ಸಲ್ಲಿಸಿ ಹಲವಾರು ವೈಖಾನಸಾಗಮ ಕೃತಿಗಳನ್ನು ಸಂಪಾದಿಸಿಕೊಟ್ಟ ಪಾರ್ಥಸಾರಥಿ ಭಟ್ಟಾಚಾರ್ಯರ ವಿವಿಧ ಮುಖದ ಸೇವೆಗಳನ್ನು ಪಾಂಡಿತ್ಯ ಪ್ರತಿಭೆಗಳನ್ನು ಶ್ಲಾಘಿಸಲಾಯಿತು. ತಿ.ತಿ.ದೇ. ಪ್ರಕಟನಶಾಖೆ ಶ್ರೀಯುತರ ಹಲವಾರು ಪುಸ್ತಕಗಳನ್ನು ಪ್ರಕಟಿಸಿದ್ದು ಅವು ಮರುಮುದ್ರಣವಾಗಬೇಕಾಗಿರುವ ಅಗತ್ಯವನ್ನು ಕುರಿತು ಅವಧಾರಿಸಲಾಯಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಎ. ರಾಮಸ್ವಾಮಿ ದೀಕ್ಷಿತರು ವಹಿಸಿದ್ದರು. ಶ್ರೀ ಡಿ. ವಿಖನಸಾಚಾರ್ಯರು ಸಭೆಯನ್ನು ಸ್ವಾಗತಿಸಿ, ವಂದಿಸಿದರು.

ತಿ. ತಿ. ದೇವಸ್ಥಾನಗಳು ಪಾರ್ಥಸಾರಥಿ ಭಟ್ಟಾಚಾರ್ಯರ ವೈಖಾನಸಾಗಮ ಕೃತಿಗಳನ್ನು ಪುನರ್ಮುದ್ರಣದ ಏರ್ಪಾಡು ಮಾಡುತ್ತಿದೆ.

## ಕಲ್ಯಾಣ ಮಂಟಪಗಳಿಗೆ ಶಂಕುಸ್ಥಾಪನೆ

ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಭಾಕರಾಪೇಟೆ, ತಲಕೋನ, ವಾಯಲ್ಪಾಡುಗಳಲ್ಲಿ ತಿ.ತಿ.ದೇ. ಕಲ್ಯಾಣಮಂಟಪಗಳ ನಿರ್ಮಾಣಕ್ಕೆ ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಆಗಸ್ಟ್ 1 ರಂದು ಶಂಕುಸ್ಥಾಪನೆ ಮಾಡಿದರು.

ಭಾಕರಾಪೇಟೆಯಲ್ಲಿ ಸುಮಾರು 18 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣವಾಗುವ ಕಲ್ಯಾಣ ಮಂಟಪದ ಶಂಕುಸ್ಥಾಪನಾ ಸಭೆಯಲ್ಲಿ ಮಾತನಾಡುತ್ತ ಮಂತ್ರಿವರ್ಯರು ಆಂಧ್ರಪ್ರದೇಶದಲ್ಲಿ 123 ತಿ.ತಿ.ದೇ. ಕಲ್ಯಾಣಮಂಟಪಗಳ ನಿರ್ಮಾಣ ಪೂರ್ತಿಯಾಗಿದೆಯೆಂದೂ 21.45 ಕೋಟಿ ರೂಗಳ ವೆಚ್ಚದಲ್ಲಿ 65 ಕಲ್ಯಾಣಮಂಟಪಗಳು ನಿರ್ಮಾಣದ ಹಂತದಲ್ಲಿವೆಯೆಂದೂ ಮತ್ತೂ 4 3 ಕಲ್ಯಾಣ ಮಂಟಪಗಳು ನಿರ್ಮಾಣವಾಗಲಿವೆಯೆಂದೂ ತಿಳಿಸುತ್ತ, ಕರ್ನಾಟಕದಲ್ಲಿ ಎರಡು ನಿರ್ಮಾಣ ಪೂರ್ತಿ ಆಗಿದೆಯೆಂದೂ ಮತ್ತೊಂದು ನಿರ್ಮಾಣದ ಹಂತದಲ್ಲಿದೆಯೆಂದೂ, ಕೇರಳ - ಒರಿಸ್ಸಾಗಳಲ್ಲಿ ಒಂದೊಂದು ನಿರ್ಮಾಣವಾಗಿದೆಯೆಂದೂ, ತಮಿಳುನಾಡಿನಲ್ಲಿ ಒಂದು ನಿರ್ಮಾಣದ ಹಂತದಲ್ಲಿದೆಯೆಂದೂ ನುಡಿದರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ ಕುಮಾರ್ ಮಾತನಾಡುತ್ತ ಈ ಕಲ್ಯಾಣಮಂಟಪಗಳಲ್ಲಿ ವಿವಾಹಾದಿ ಶುಭಕಾರ್ಯಗಳೇ ಅಲ್ಲದೆ ಧರ್ಮಪ್ರಚಾರ ಪರಿಷತ್ ಕಾರ್ಯಕ್ರಮಗಳೂ ನಡೆಯುತ್ತವೆ ಎಂದರು.

ತಲಕೋನದಲ್ಲಿ 30 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ 12 ಕೋಣೆಗಳ ತಿ.ತಿ. ದೇ. ಕಲ್ಯಾಣ ಮಂಟಪದ ಶಂಕುಸ್ಥಾಪನಾ ಸಭೆಯಲ್ಲಿ ಮಾತನಾಡುತ್ತ ಮಂತ್ರಿವರ್ಯರು ಇಲ್ಲಿನ ಸಿದ್ಧೇಶ್ವರಸ್ವಾಮಿಯ ಭಕ್ತರಿಗೆ ಈ ಕಲ್ಯಾಣಮಂಟಪದಿಂದ ಅನುಕೂಲವಾಗುತ್ತದೆ ಎಂದರು.

ವಾಯಲ್ಪಾಡು ಗ್ರಾಮದಲ್ಲಿ 18 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣವಾಗಲಿರುವ ತಿ.ತಿ.ದೇ. ಕಲ್ಯಾಣ ಮಂಟಪಕ್ಕೆ ಶಂಕುಸ್ಥಾಪನೆ ಮಾಡಿದ ಮಂತ್ರಿಗಳು ಮತೀಯ ಸಾಮರಸ್ಯದ, ಸಹಿಷ್ಣುತೆಯ ಬಗ್ಗೆ ಒತ್ತು ನೀಡಿ ಮಾತನಾಡಿದರು.




Edited and Published on behalf of T.T. Devasthanams by N.S. Rama Murthy, M.A., and Printed at T.T.D. Press by M. Lakshmana Rao, B.A., L.P.T., Manager, T.T.D. Press, Tirupati - 517 507.

